# ಚಂದ್ರಿಕಾ

## ತತ್ತ್ವವಾದ ವಿಶೇಷಾಂಕ



ಶ್ರೀ ವ್ಯಾಸರಾಜರ ೫೦೦ ಅಬ್ದಿಯ ಸ್ಮರಣಾರ್ಥ ಸಂಚಿಕೆ

ಸಂಪಾದಕರು – ಶ್ರೀ ಪಂಢರಿನಾಥಾಚಾರ್ಯ ಗಲಗಲಿ

ತತ್ವನಾದ

ಅಖಿಲ ಭಾರತ ಮಾಧ್ವ ಮಹಾ ಮಂಡಲದ ಮುಖ ಪತ್ರಿಕೆ

ವಿಶೇಷಾಂಕ

# ಚಂದ್ರಿಕಾ

ಶ್ರೀವ್ಯಾಸರಾಜರ ಪಂಚಶತಾಬ್ಧಿ ಸ್ಮರಣಾರ್ಥ

ಕ್ರೋಧನ ಸಂವತ್ಸರ ಶ್ರಾವಣ ಬಹುಳ ದ್ವಿತೀಯಾ ೧ನೇ ಸೆಪ್ಟಂಬರ್ ೧೯೮೫

ಬೆಲೆ.

**ಸಂಪಾದಕರು :**

ಪಂಡಿತ, ಪಂಡರೀನಾಥಾ ಚಾರ್ಯ ಗಲಗಲಿ.

ಡಾ॥ ಎಂ. ಕೆ. ಭಾರತೀರಮಣಾಚಾರ್ಯ

**ವಿಶೇಷ ಸಂಚಿಕೆ ಸಂಪಾದಕರು :**

ಶ್ರೀ ಹಯವದನ ಪುರಾಣಿಕ

ಎ. ಹರಿದಾಸಭಟ್ಟ

**ಸಲಹಾಮಂಡಲಿ :**

ಪ್ರಾಚಾರ್ಯ ಕೆ. ಟಿ. ಪಾಂಡುರಂಗಿ

ಶ್ರೀ ಡಿ. ಪ್ರಹ್ಲಾದಾಚಾರ್ಯರು

ಶ್ರೀ ಆರ್. ಕೆ. ಜೋಷಿ

ಶ್ರೀ ಎಂ. ಎಚ್. ಕೌಜಲಗಿ

ಶ್ರೀ ಕೆ. ವೆಂಕೋಬರಾಯರು

ಶ್ರೀಮತಿ. ರುಕ್ಮಿಣಿ ಗಿರಿಮಾಜಿ

ಶ್ರೀಮತಿ. ಕಾಕೋಳು ಸರೋಜಾರಾವ್

---

ಈ ಪತ್ರಿಕೆಯನ್ನು ಅ. ಭಾ. ಮಾ. ಮಹಾಮಂಡಳದ ಕಾರ್ಯದರ್ಶಿಗಳಾದ ಶ್ರೀ ಎನ್. ಕೃಷ್ಣಸ್ವಾಮಿಯವರು ಪಿ. ಎಂ. ಬಿ. ಆಫ್‌ಸೆಟ್ ಪ್ರಿಂಟರ್ಸ್ ಪ್ರೈವೇಟ್ ಲಿಮಿಟೆಡ್, ಮಲ್ಲೇಶ್ವರಂ, ಫೋನ್ : 369730 ಪ್ರೆಸ್ಸಿನಲ್ಲಿ ಮುದ್ರಿಸಿ, ಅ. ಭಾ. ಮಾ. ಮ. ಪರವಾಗಿ ಬೆಂಗಳೂರಿನಲ್ಲಿ ಪ್ರಕಟಿಸಿ ಪ್ರಸಿದ್ಧಿಸಿದರು.

# ವ್ಯಾಸರಿಗೊಲಿದ ಭೈಷ್ಮೀಸತ್ಯಾಸಮೇತ ಶ್ರೀಕೃಷ್ಣ



ಶ್ರೀಪಾದರಾಜರಿಗೆ ಸ್ವಪ್ನಲಬ್ಧವಾಗಿ ಶ್ರೀವ್ಯಾಸತೀರ್ಥರಿಗೆ ಒಲಿದು ಅವರ ಪ್ರಾರ್ಥನೆಯಂತೆ ನೃತ್ಯ ಭಂಗಿಗೆ ವಿರುದ್ಧವಾಗಿ ಬಲಗಾಲ ಮೇಲೆ ಎಡಗಾಲನ್ನಿರಿಸಿದ್ದಾನೆ.

# ಸಮರ್ಪಣೆ



ಪರಾಪರ ವಿದ್ಯೆಗಳ ಸಮನ್ವಯ ಸ್ವರೂಪರಾಗಿ ಮಧ್ವಸಿದ್ಧಾಂತದ ಸೇವೆಯಲ್ಲಿ ತಮ್ಮ ಜೀವಿತವನ್ನು ಸಾರ್ಥಕಗೊಳಿಸಿದ ಸಚ್ಛಾಸ್ತ್ರಪ್ರವಚನರತ್ನ, ವಿದ್ಯಾವಾಚಸ್ಪತಿ, ಶಾಸ್ತ್ರನಿಧಿ ಮಾಧ್ವಭೂಷಣ ದಿ॥ ರಾವ್‌ಬಹದ್ದೂರ್ ವೆಂಕಟೇಶಾಚಾರ್ಯರು ತಮ್ಮ ಸ್ಮಾರಕ ನಿಧಿಯ ಮೂಲಕ ಸತ್ಸಿದ್ಧಾಂತವನ್ನು ಪ್ರೋತ್ಸಾಹಿಸುವ ಮಕ್ಕಳನ್ನು ನೋಡಿ ಅದೆಷ್ಟು ಧನ್ಯರಾದಾರು.

# ಸಂದೇಶ



ತತ್ವವಾದ ಮಾಸ ಪತ್ರಿಕೆಯವರು "ಶ್ರೀಮನ್ಮಧ್ವಾಚಾರ್ಯರ" ಪರಂಪರೆಯಲ್ಲಿ ಪ್ರಖ್ಯಾತರಾದ "ಶ್ರೀಮದ್ವ್ಯಾಸರಾಜ ಗುರುಸಾರ್ವಭೌಮರ ಮಹಿಮೆಗಳನ್ನೊಳಗೊಂಡ ವಿಶೇಷ ಸಂಚಿಕೆಯನ್ನು ಬಿಡುಗಡೆ ಮಾಡುತ್ತಿರುವ ವಿಷಯ. ನಮಗೆ ತುಂಬಾ ಸಂತೋಷವಾಗಿದೆ ಸುಜನರು ಶ್ರೀವ್ಯಾಸರಾಜರ ಮಹಿಮೆಗಳನ್ನು ತಿಳಿದು ಅವರಲ್ಲಿ ಭಕ್ತಿವರ್ಧನಗೆ ಅನುಕೂಲವಾಗಲೆಂದು ನಮ್ಮ ಉಪಾಸ್ಯಮೂರ್ತಿ ಶ್ರೀಮದ್ವ್ಯಾಸಮುನಿವರದ ಶ್ರೀ ರುಕ್ಮಿಣೀಸತ್ಯಭಾಮಾಸಮೇತ ಶ್ರೀ ವೇಣುಗೋಪಾಲ ಕೃಷ್ಣ ದೇವರಲ್ಲಿ ಪ್ರಾರ್ಥಿಸುತ್ತೇವೆ.

ಇತಿ ನಾರಾಯಣ ಸ್ಮರಣೆಗಳು

**ಶ್ರೀ ಲಕ್ಷ್ಮೀಶತೀರ್ಥ ಶ್ರೀಪಾದಂಗಳವರು**

ಕುಂದಾಪುರ ವ್ಯಾಸರಾಜ ಮಠ

# ಸಂದೇಶ



ತತ್ವ ಶಾಸ್ತ್ರಾಕಾಶದಲ್ಲಿ ಪ್ರಚಂಡ ಸೂರ್ಯನಂತೆ ಬೆಳಗಿ ದುರ್ವಾದಿ
ಕುಮುದಗಳನ್ನು ಬಾಡಿಸಿ ಸಜ್ಜನರ ಹೃದಯಾಕಾಶದಲ್ಲಿ ಚಂದ್ರನಂತೆ
ಬೆಳಗಿ ಜ್ಞಾನ ಚಂದ್ರಿಕೆಯನ್ನು ಬೀರಿದ ಶ್ರೀವ್ಯಾಸರಾಜ ಚಂದ್ರನ
ಬಗ್ಗೆ ನೀವು ಒಂದು ಸ್ಮರಣ ಸಂಚಿಕೆಯನ್ನು ಬಿಡುಗಡೆ ಮಾಡುತ್ತಿ
ರುವುದು ತಿಳಿದು ನಮಗೆ ಪರಮಸಂತೋಷವಾಗಿದೆ.

ನಾರಾಯಣಸ್ಮರಣೆಗಳು
ಶ್ರೀವಿದ್ಯಾಪಯೋನಿಧಿತೀರ್ಥರು
**ವ್ಯಾಸರಾಜ ಮಠ**

# ಸಂದೇಶ



ತತ್ವವಾದ ಸಂಚಿಕೆಯು ಬಹಳಕಾಲದಿಂದಲೂ ಉತ್ತಮ ತತ್ವ ಪ್ರಕಟಣೆಯ ಮೂಲಕ ಸಜ್ಜನರ ಮೆಚ್ಚಿಕೆಗೆ ಪಾತ್ರವಾಗಿದೆ. ಈಗ ವಿಶೇಷವಾಗಿ "ಶ್ರೀಮದ್ವ್ಯಾಸರಾಜರ" ಮಹಿಮೆಗಳನ್ನೊಳಗೊಂಡು ಸಜ್ಜನರ ಕೈ ಸೇರುತ್ತಿರುವುದು ನಮಗೆ ತುಂಬಾ ಸಂತೋಷದ ವಿಷಯವಾಗಿದೆ

ಈ ಪತ್ರಿಕೆ ಹೊರಡಲು ಕಾರಣರಾದ ಸಕಲ ಸಜ್ಜನರಿಗೂ ಆಯುರಾರೋಗ್ಯ ಐಶ್ವರ್ಯಾದಿಗಳನ್ನ ದಯಪಾಲಿಸಲಿ ಎಂದು ಶ್ರೀಮದ್ವ್ಯಾಸಮುನಿವರದ ಶ್ರೀರುಕ್ಮಿಣೀ ಸತ್ಯಭಾಮಾ ಸಮೇತ ಶ್ರೀ ವೇಣುಗೋಪಾಲ ಕೃಷ್ಣದೇವರಲ್ಲಿ ಪ್ರಾರ್ಥಿಸುತ್ತೇವೆ.

ಇತಿ ನಾರಾಯಣ ಸ್ಮರಣೆಗಳು

**ಶ್ರೀ ಲಕ್ಷ್ಮೀಂದ್ರತೀರ್ಥ ಶ್ರೀಪಾದಂಗಳವರು**

ಕುಂದಾಪುರವ್ಯಾಸರಾಜ ಮಠ

# ಹೃತ್ಪೂರ್ವಕ

'ಚಂದ್ರಿಕಾ'ದ ಘನತೆಯನ್ನು ತಮ್ಮ ಅನುಗ್ರಹ ಸಂದೇಶದಿಂದ ನೂರ್ಮಡಿ ಹೆಚ್ಚಿಸಿ ತತ್ತ್ವವಾದಕ್ಕೆ ಸಂದೇಶವಿತ್ತಿರುವ ಪರಮ ಪೂಜ್ಯ ಭಂಡಾರಕೇರಿ ಹಾಗೂ ಪಲಿಮಾರು ಉಭಯ ಮಠದ ಶ್ರೀಪಾದಂಗಳವರಾದ

ಶ್ರೀ 108 ವಿದ್ಯಾಮಾನ್ಯ ತೀರ್ಥ ಶ್ರೀಪಾದಂಗಳವರಿಗೂ

ಕುಂದಾಪುರ ವ್ಯಾಸರಾಜಮಠ ಧೀಶರಾದ

ಶ್ರೀ 108 ಲಕ್ಷ್ಮೀಶತೀರ್ಥ ಶ್ರೀಪಾದಂಗಳವರಿಗೂ

ಶ್ರೀ 108 ಲಕ್ಷ್ಮೀಂದ್ರತೀರ್ಥರಿಗೂ

ಶ್ರೀ 108 ಸೋಸಲೆ ಶ್ರೀವ್ಯಾಸರಾಯ ಮಠಾಧೀಶರಾದ ವಿದ್ಯಾಪಯೋನಿಧಿ ತೀರ್ಥ ಶ್ರೀಪಾದಂಗಳವರಿಗೂ ತಮ್ಮ ಅಮೂಲ್ಯ ಬರಹಗಳನ್ನಿತ್ತು ಸಂಗ್ರಹ ಯೋಗ್ಯವಾಗಿ ಮಾಡಿರುವ ಶ್ರೀ ವಿದ್ಯಾಧೀಶತೀರ್ಥರು, ಪಲಿಮಾರು ಮಠದ ಕಿರಿಯ ಶ್ರೀಪಾದಂಗಳವರು — ಇವರಿಗೂ. ವಿದ್ವನ್ಮಣಿಗಳಿಗೂ, ಸುಂದರ ವರ್ಣಚಿತ್ರವನ್ನು ಕೊಟ್ಟ ಕು. ಗಂಗಾವತಿಯವರಿಗೂ

ಅಮೂಲ್ಯ ಪಡಿಯಚ್ಚುಗಳನ್ನೊದಗಿಸಿರುವ,

ಶ್ರೀ ಕುಂದಾಪುರ ವ್ಯಾಸರಾಯ ಮಠದ ಶ್ರೀಪಾದರಿಗೂ

ಡಾ।। ರಾಣ್ಯಾ ರಾಜಾರಾಯರಿಗೂ. ಹರಿವಿಠಲ ಪ್ರಕಾಶನ

ಶ್ರೀ ವೆಂಕೋಬರಾಯರಿಗೂ

ಸಂಪಾದಕೀಯ ಕಾರ್ಯ ಗುರುತರ ಹೊಣೆಗಾರಿಕೆಯನ್ನು ಹೊತ್ತ ಶ್ರೀ ಹಯವದನ ಪುರಾಣಿಕ ಮತ್ತು ಎ. ಹರಿದಾಸಭಟ್ಟ ಇವರಿಗೂ, ಧನ ಸಹಾಯವನ್ನಿತ್ತಿರುವ ಶ್ರೀ ಶ್ರೀ ಲಕ್ಷ್ಮೀಂದ್ರತೀರ್ಥ ಶ್ರೀಪಾದರು, ಕುಂದಾಪುರ ವ್ಯಾಸರಾಯಮಠ-ಇವರಿಗೂ ದಿ. ರಾವ್‌ಬಹದ್ದೂರ್ ವೆಂಕಟೇಶಾಚಾರ್ಯ ವಿಶ್ವಸ್ಥನಿಧಿಯ, ಸದಸ್ಯರುಗಳಾದ

ಶ್ರೀ ರಾಘವೇಂದ್ರರಾವ್, ಶ್ರೀ ಬಿ. ಎಸ್. ಪ್ರಾಣೇಶರಾಯರು

ಶ್ರೀ ಗೋಪಾಲಕೃಷ್ಣರಾಯರಿಗೂ

ಕೆಂಗೇರಿ ರಾಘವೇಂದ್ರ ಮಠದವರಿಗೂ, ಜಾಹಿರಾತುದಾರರಿಗೂ,

''ನಮನ'' ವನ್ನು ಸಲ್ಲಿಸಿದ ಭಕ್ತ ವೃಂದಕ್ಕೂ ಮುಂಗಡ ಪ್ರತಿಗಳನ್ನು ಕೊಂಡ ತತ್ತ್ವವಾದದ ಚಂದಾದಾರರಿಗೂ ಹಾಗೂ ಸಾರ್ವಜನಿಕರಿಗೂ

ಮುಖಪುಟವನ್ನು ಸುಂದರವಾಗಿ ಅಚ್ಚು ಮಾಡಿಕೊಟ್ಟ ಶ್ರೀ ಬೃಂದಾವನ ಪ್ರಿಂಟರ್ಸ ರವರಿಗೂ, ಸುಂದರವಾಗಿ ಒಳಭಾಗವನ್ನು ಮುದ್ರಿಸಿರುವ ಪಿ.ಎಂ.ಬಿ. ಆಫ್‌ಸೆಟ್ ಪ್ರೈವೇಟ್ ಲಿಮಿಟೆಡ್, ಮಲ್ಲೇಶ್ವರಂ, ಫೋನ್ : 369730, ಬಳಗದವರಿಗೂ, ಕಛೇರಿಯ ಸಿಬ್ಬಂದಿ ವರ್ಗದವರಿಗೂ ತನು ಮನಗಳಿಂದ ಎಲೆಮರೆಯ ಕಾಯಿಯಂತೆ ದುಡಿದಿರುವ ಅಭಿಮಾನಿಗಳಿಗೂ ಅನಂತಾನಂತ ವಂದನೆಗಳು.

# ಸಂಪಾದಕೀಯ

ಶ್ರೀ ಗುರುಭ್ಯೋ ನಮಃ

ಪ್ರಮಾಣ ಪ್ರಮಿತವಾದುದನ್ನು ಮಾತ್ರ ಸಮೀಚೀನ ಜ್ಞಾನವೆಂದು ಅಂಗೀ ಕರಿಸಬೇಕು. ತಮ್ಮ ಬುದ್ಧಿಬಲದಿಂದ ಸನ್ಮಾರ್ಗವನ್ನು ತೋರುವೆವೆಂಬ ದಾರ್ಶನಿಕರ ದೃಷ್ಟಿವಾದ ಕೋಲಾಹಲಕ್ಕೆ ಕಾರಣವಾದೀತೆ ಹೊರತು ಸತ್ಯದ ಸಾಕ್ಷಾತ್ಕಾರಕ್ಕೆ ನೆರವಾಗದು ಎಂದು ಜಗತ್ತಿಗೆ ಸಾರಿ ಹೇಳಿದ ಮಹಾ ವೈಜ್ಞಾನಿಕ ಮನೋಧರ್ಮದ ತತ್ವಜ್ಞಾನಿ ಶ್ರೀಮದಾನಂದ ತೀರ್ಥ ಭಗವತ್ಪಾದರು. ತತ್ವವಾದವೇ ಅವರ ಮತ.

ಇವರ ಗ್ರಂಥಗಳ ಶೈಲಿ ಸರಳ, ಗಂಭೀರ, ಸೂತ್ರಪ್ರಾಯ. ಇದರ ಹಾರ್ದ ವನ್ನರಿಯಲು ಶ್ರೀಮಜ್ಜಯತೀರ್ಥರ ಟೀಕೆಗಳು ಅತ್ಯಗತ್ಯ. ನಿತ್ಯಪಾಠ ಪ್ರವಚನ ದಲ್ಲಿ ನಿರತರಾದ ಟಿಪ್ಪಣೀಕಾರರ ಟಿಪ್ಪಣಿಗಳೂ ಅನಿವಾರ್ಯ.

ಇಷ್ಟಾದರೂ ಶಾಸ್ತ್ರಾಂತರಗಳ ಬಲದ ಮೇಲೆ ಜಿಜ್ಞಾಸುಗಳು ಎಬ್ಬಿಸುವ ವಾಕ್ಯಾರ್ಥ ಕೋಲಾಹಲವನ್ನು ಎದುರಿಸಲು ಬೇಕಾಗಿತ್ತು ನ್ಯಾಯಾಮೃತ, ತರ್ಕ ತಾಂಡವ ಹಾಗೂ ಚಂದ್ರಿಕಾ. ಈ ಪ್ರೌಢಕೃತಿಗಳ ರಚನೆಯಲ್ಲೂ ಸಹ ನೋಡಬೇಕು ಶ್ರೀವ್ಯಾಸರಾಯರ ಗುರುಭಕ್ತಿ.

ವ್ಯಾಸರಾಯರ ವ್ಯಕ್ತಿತ್ವ ಬಹುಮುಖವಾದುದು. ಅವರ ವ್ಯಕ್ತಿತ್ವವನ್ನು ಈ ಕಿರುಸಂಚಿಕೆಯಲ್ಲಿ ಸೆರೆ ಹಿಡಿಯುವುದು ಕನ್ನಡಿಯಲ್ಲಿ ಭಾಸ್ಕರನನ್ನು ತೋರಿಸಿದಂತೆ, ನಮ್ಮ ಇತಿಮಿತಿಗಳಿಂದಾಗಿ ಯಾರೂ ಅವರ ವ್ಯಕ್ತಿತ್ವವನ್ನು ಲಾಘವವಾಗಿ ಪರಿ ಗಣಿಸಬಾರದು. ವಿತ್ತಶಾಠ್ಯಕ್ಕೆ ಮಾರುಹೋಗದೆ ಆದರೆ ವಿತ್ತಲೋಭಕ್ಕೆ ಎಡೆ ಗೊಡದೆ ಪ್ರಾಮಾಣಿಕವಾಗಿ ಪ್ರಯತ್ನಿಸಿ ಯಥಾಯೋಗ್ಯ ಈ ಸುಂದರ ವಿಶೇಷಾಂಕ ಚಂದ್ರಿಕಾವನ್ನು ಸಹೃದಯರ ಕೈಗೊಪ್ಪಿಸಿದ್ದೇವೆ.

ನಮಗೆ ಆರ್ಥಿಕ ಬಲವನ್ನಿತ್ತ ಪೂಜ್ಯ ಶ್ರೀ ಕುಂದಾಪುರ ವ್ಯಾಸರಾಜ ಮಠಾ ಧೀಶರನ್ನು ಶ್ರೀರಾವ್‌ಬಹದ್ದೂರ್ ವೆಂಕಟೇಶಾಚಾರ್ಯ ವಿಶ್ವಸ್ಥ ಮಂಡಳಿಯ ಪ್ರಮುಖರಾದ ಶ್ರೀ ಬಿ. ವಿ. ರಾಘವೇಂದ್ರರಾವ್‌ರವರನ್ನು ಕೆಂಗೇರಿ ಶ್ರೀ ರಾಘ ವೇಂದ್ರ ವೃಂದಾವನ ಸೇವಾ ಸಮಿತಿಯವರನ್ನೂ ಇಲ್ಲಿ ಕೃತಜ್ಞತೆ ಇಂದ ನೆನೆಯು ವುದು ನಮ್ಮ ಕರ್ತವ್ಯ.

ನಮ್ಮ ಸಂಕಲ್ಪ ತಿಳಿದೊಡನೆ ಅತ್ಯುತ್ಸಾಹದಿಂದ ಒಂದು ಕಿರುಹೊತ್ತಿಗೆಗಾಗು ವಷ್ಟು ಶ್ರೀ ವ್ಯಾಸತೀರ್ಥರ ಬದುಕು ಬರಹಗಳನ್ನು ಕುರಿತು ಲೇಖನವನ್ನು ಹಿರಿಯ ರಾದ ಶಾಂತಾಚಾರ್ಯರು ಕೊಟ್ಟಿದ್ದರೂ ಅದರ ಅಚ್ಚು ಹಾಕಿಸಲಾಗಲಿಲ್ಲ. ಚರ್ವಿತ ಚರ್ವಣವಾಗಬಾರದೆಂಬ ಕಾರಣದಿಂದ. ಸಂಗೀತ ವಿದುಷಿ ಶ್ರೀಮತಿ ಜಾನಕಿಯವರ ವಿದ್ವತ್ತಿನ ಲಾಭವನ್ನೂ ಪೂರ್ಣಪಡೆಯಲಾಗಲಿಲ್ಲ. ನಮ್ಮ ಇತಿಮಿತಿಗಳಿಂದ. ಇವರ ಹಾಗೂ ಇನ್ನಿತರರು ಒದಗಿಸಿದ ಪೂರ್ಣ ಸಾಮಗ್ರಿಯ ಬಳಕೆ ಮಾಡಿಕೊಳ್ಳದೆ ನಿರಾಶರನ್ನಾಗಿ ಮಾಡಿದ ನಮ್ಮ ಅಲ್ಪಶಕ್ತಿಗೆ ನಾಚುತ್ತಾ ಅವರೆಲ್ಲರ ಕ್ಷಮೆಯನ್ನು ಯಾಚಿಸುತ್ತಿದ್ದೇವೆ.

ತತ್ತ್ವವಾದ ಸಮಗ್ರ ಮಾಧ್ವಸಮಾಜ ಬಾಂಧವರಿಗೆ ಸೇರಿದ್ದು. ಅಭಿಮಾನ ದಿಂದ ಇದನ್ನು ಇತೋಪ್ಯತಿಶಯವಾಗಿ ಬೆಳಸಬೇಕೆಂದೂ ಸಾಕಷ್ಟು ಪ್ರೋತ್ಸಾಹ ಕೊಟ್ಟಲ್ಲಿ ನಮ್ಮ ವಾಙ್ಮಯ ತಪಸ್ವಿಗಳ ಪರಿಚಯವನ್ನು ಹೀಗೆ ವಿಶೇಷಾಂಕಗಳ ಮೂಲಕ ಒದಗಿಸಲು ಸಾಧ್ಯವಾಗುವುದೆಂದೂ ನಿವೇದಿಸಿಕೊಂಡು ಈ ಕಿರುಗಾಣಿಕೆ ಯನ್ನು ಸ್ವೀಕರಿಸಬೇಕಾಗಿ ವಿನಂತಿ.



**ವಿಚಾರ ಸುಮನ**

## ತತ್ತ್ವವಾದಿ

ವಿಜ್ಞಾನಿ ಹಾಗೂ ತತ್ತ್ವಜ್ಞಾನಿ ಇಬ್ಬರೂ ಸತ್ಯದ ನೆಲೆಯನ್ನು ಕಾಣಲು ಹೊರ ಟವರು. ಈ ಕಾರ್ಯ ಸುಲಭಸಾಧ್ಯವಲ್ಲ. ಆದ್ದರಿಂದಲೇ ವಿಜ್ಞಾನ ಹಾಗೂ ತತ್ತ್ವಶಾಸ್ತ್ರಗಳಲ್ಲಿ ಪರಿಣಾಮಕಾರಿ ಕಾರ್ಯ ನಡೆಸಿದ ಜ್ಞಾನಿಗಳು ಅಧಿಕರಿಲ್ಲ.

ಸತ್ಯಾನ್ವೇಷಣೆಯಲ್ಲಿ ತೊಡಗಿದವನು ಪ್ರಮಾಣಪ್ರಮಿತವಲ್ಲದ್ದನ್ನು ಹೇಳ ಬಾರದು. ಯುಕ್ತಿ ಸಂಗತವಲ್ಲದ್ದನ್ನು ಮಂಡಿಸಬಾರದು. ಮಾತಿನ ಮೋಡಿ ಇಂದಲೋ, ಅವಿಚಾರ ರಮಣೀಯ ಆಕರ್ಷಕ ವಿಷಯಗಳನ್ನು ಸಿದ್ಧಾಂತವೆಂದು ಪ್ರತಿಪಾದಿಸುವುದರಿಂದಲೋ ಅಗ್ಗದ ಕೀರ್ತಿಯನ್ನು ಪಡೆಯಬಹುದೇ ಹೊರತು ಸ್ವರೂಪೋದ್ಧಾರಕ್ಕೆ ಕಾರಣವಾದ ತತ್ತ್ವದ ನೆಲೆಯನ್ನು ತೋರಿಸಲು ಸಾಧ್ಯವಿಲ್ಲ. ಅದನ್ನು ಕಲ್ಪನೆಯ ಚೌಕಟ್ಟಿನಲ್ಲಿ ಸೆರೆಹಿಡಿದಿಡಲು ಸಾಧ್ಯವಿಲ್ಲ. ಆ ಕ್ರಮ ಸಾಧು ವಲ್ಲ. ವಿಜ್ಞಾನಿಯ ಹೊಣೆಗಾರಿಕೆಗಿಂತಲೂ ಗುರುತರ ಹೊಣೆಗಾರಿಕೆ ಹೊತ್ತ ತತ್ತ್ವಜ್ಞಾನಿ ಅಪದ್ಧ ಸಿದ್ಧಾಂತಗಳನ್ನು ಮಂಡಿಸಬಾರದು. ಅದು ಅನರ್ಥಕಾರಿ. ಅತೀಂದ್ರಿಯ ಕ್ಷೇತ್ರದಲ್ಲಿ ಸೂಕ್ಷ್ಮ ಪ್ರಜ್ಞೆ ಇಂದ ಇಣುಕಿ, ಪ್ರಮಾಣತ್ರಯಗಳಿಗೆ ಒಪ್ಪುವ ಸತ್ಯವನ್ನು ವಿವರಿಸಬೇಕು.

ಅನಾರೋಪಿತವಾದುದು ತತ್ತ್ವವಲ್ಲವೆ ?

—ಚಂಚರೀಕ

## ವಿಷಯಾನುಕ್ರಮಣಿಕೆ

# ದ್ವೈತ ದರ್ಶನದಲ್ಲಿ ಶ್ರೀವ್ಯಾಸರಾಜರ ಸ್ಥಾನ

–ವಿದ್ಯಾರತ್ನ ಶಾಸ್ತ್ರನಿಧಿ ಮಧ್ವಮುನಿಪ್ರಿಯ ಡಾ॥ ಬಿ. ಎನ್. ಕೆ. ಶರ್ಮಾ.

ಶ್ರೀವ್ಯಾಸರಾಜರ ಕಾಲವು ದ್ವೈತ ದರ್ಶನದ ಒಂದು ದೊಡ್ಡ ಸುವರ್ಣ ಯುಗ ಅವರಿಗಿಂತ ಹಿಂದೆಯಾಗಲಿ ಮುಂದೆಯಾಗಲಿ ಸರ್ವತೋಮುಖ ಅಭಿವೃದ್ಧಿಯಲ್ಲಿ ಅದನ್ನು ಸರಿಗಟ್ಟುವ ಕಾಲ ಇನ್ನೊಂದು ಬಂದಿರಲಿಲ್ಲ, 'ಭಾರತೀಯ ಜನತೆಯ ಚರಿತ್ರೆ ಹಾಗೂ ಸಂಸ್ಕೃತಿ' ಎಂಬ ಬೊಂಬಾಯಿ ಭಾರತೀಯ ವಿದ್ಯಾಭವನ ಪ್ರಕಾಶನದ ದೊಡ್ಡ ಹೊತ್ತಿಗೆಯೊಂದರ ಸಂಪಾದಕರು ಅದರ 'ದಿಲ್ಲಿ ಸುಲ್ತಾನರ ಕೈಕೆಳಗೆ ಭಾಷೆ ಮತ್ತು ಸಾಹಿತ್ಯ' ಎಂಬ ಅಧ್ಯಾಯ (ಭಾಗ–6 ಅಧ್ಯಾಯ-15) ದಲ್ಲಿ ಭಾರತೀಯ ದರ್ಶನ ಸಾಹಿತ್ಯಕ್ಕೆ ವಿಜಯನಗರ ಕಾಲದಲ್ಲಿ ವ್ಯಾಸತೀರ್ಥರು ಕೊಟ್ಟ ನವಯುಗ ನಿರ್ಮಾಣಕಾರಿ ಕೊಡುಗೆಯ ಬಗ್ಗೆ ಒಂದಿಷ್ಟು ಹೇಳಲು ಮರೆತಿರುವುದು ಬಹಳ ನಿರಾಶಾಜನಕವಾಗಿದೆ.

ವ್ಯಾಸತೀರ್ಥರ ನೇತೃತ್ವದಲ್ಲಿ ಮಾಧ್ವ ತತ್ವಜ್ಞಾನದ ಪ್ರಭಾವವು ರಾಜಕೀಯ ಕ್ಷೇತ್ರದಲ್ಲಿಯೂ ಅತ್ಯುನ್ನತ ಮಟ್ಟಕ್ಕೇರಿತ್ತು. ದಕ್ಷಿಣ ಭಾರತದ ಅತಿಶ್ರೇಷ್ಠ ಹಿಂದೂ ಚಕ್ರವರ್ತಿಯಾಗಿ ಮೆರೆದು ಅಮರನೆನಿಸಿದ ಶ್ರೀ ಕೃಷ್ಣದೇವರಾಯನಿಂದ ವ್ಯಾಸರಾಜರು ಬಲುದೊಡ್ಡ ಗೌರವಾದರಗಳನ್ನು ಅಂತರಂಗದ ಪ್ರೀತಿಯನ್ನೂ ಗಳಿಸಿದರು.

ಪ್ರಗತಿಪರ ವಿಚಾರದಲ್ಲಿ ವ್ಯಾಸತೀರ್ಥರು ತಮ್ಮ ಮತಬಾಂಧವರಿಗೆ ಒಂದು ಆದರ್ಶವನ್ನು ಮುಂದಿಟ್ಟರು. ಸಮಕಾಲೀನ ದರ್ಶನಗಳಿಂದ ಸಂಗ್ರಹಿಸಬಹುದಾದ ಸಾವ ಗ್ರಂಥಗಳ ದೊಡ್ಡ ಸಂಗ್ರಹವನ್ನು ತತ್ವಜ್ಞಾನಗಳ ಒಟ್ಟು ಸಾರವನ್ನು ಉಪಯೋಗಿಸಿಕೊಂಡರು. ವಿಷ್ಣುದಾಸಾಚಾರ್ಯರ ಮತ್ತು ವ್ಯಾಸತೀರ್ಥರ ಕಾಲಕ್ಕಿಂತ ಹಿಂದಿನ ದ್ವೈತಿಗಳಾರೂ ಮೀಮಾಂಸಾ ವ್ಯಾಕರಣ ಶಾಸ್ತ್ರಗಳನ್ನು ಅಷ್ಟಾಗಿ ಅಧ್ಯಯನ ಮಾಡಿದಂತೆಯೂ, ಅವುಗಳನ್ನು ತಮ್ಮ ಸಿದ್ಧಾಂತ ನಿರೂಪಣೆಗೆ ಅನುಕೂಲವಾಗುವಂತೆ ಸಮರ್ಥ ರೀತಿಯಿಂದ ತೋರಿಸುವ ಶ್ರಮವಹಿಸಿದಂತೆಯೂ ಕಾಣುವುದಿಲ್ಲ. ವ್ಯಾಸತೀರ್ಥರು ಬೌದ್ಧ ಧಿಕ್ಕಾರ, ನ್ಯಾಯ ಕುಸುಮಾಂಜಲಿ, ಸುರೇಶ್ವರ ವಾರ್ತಿಕ, ಕುಮಾರಿಲರ ಶ್ಲೋಕ ವಾರ್ತಿಕ, ಚಿತ್ಸುಖರ ಖಂಡನ ಖಂಡ ಖಾದ್ಯ, ಟುಪ್ ಟೀಕಾ, ಮಹಾಭಾಷ್ಯ, ಕೈಯಟ, ನ್ಯಾಸ, ರಾಣಕ ಮೊದಲಾದ ಆ ಕಾಲದ

ಪ್ರಮುಖ ಸಂಪ್ರದಾಯದ ಗ್ರಂಥಗಳಿಂದ ಹೆಜ್ಜೆ ಹೆಜ್ಜೆಗೂ ಉದಾಹರಣೆಗಳನ್ನೆತ್ತಿ ತೋರಿಸಿ ತಮ್ಮ ಅನುಯಾಯಿಗಳಿಗೆ ಅವರ ದೃಷ್ಟಿಕೋನವನ್ನು ವಿಶಾಲಗೊಳಿಸಬೇಕು, ಅಧ್ಯಯನ ಕ್ಷೇತ್ರವನ್ನು ವಿಸ್ತಾರಗೊಳಿಸಬೇಕು, ತಮ್ಮ ಸಿದ್ಧಾಂತವನ್ನು ಸಮಕಾಲೀನ ಕೃತಿಗಳ ವಿಮರ್ಶಾತ್ಮಕ ಅಧ್ಯಯನದ ಹಿನ್ನೆಲೆಯಲ್ಲಿ ಬಲಪಡಿಸಬೇಕು, ಆ ಮೂಲಕ ಮುಂದೆ ಬರಬಹುದಾದ ಪರಕೀಯರ ಆಕ್ಷೇಪಗಳನ್ನು ತಮ್ಮ ಸಿದ್ಧಾಂತದ ಆಧಾರದಿಂದಲೆ ಇದಿರಿಸಬೇಕು, ಮಾತ್ರವಲ್ಲ, ಇದರಿಂದ ತಮ್ಮ ಸಿದ್ಧಾಂತದ ವೈಶಿಷ್ಟ್ಯವನ್ನು ಪೂರ್ತಿಯಾಗಿ ಆಳವಾಗಿ ತಿಳಿದುಕೊಂಡು ಎಲ್ಲೆಡೆ ಹೆಚ್ಚು ಸಮರ್ಥ ರೀತಿಯಿಂದ ಪ್ರಚಾರ ಮಾಡಬಹುದು ಎಂಬುದನ್ನು ತೋರಿಸಿಕೊಟ್ಟರು.

ವ್ಯಾಸತೀರ್ಥರು ಬಾಳಿ ಬದುಕಿ, ದ್ವೈತವೇದಾಂತಕ್ಕೆ ಅದರ ಸೂತ್ರಪ್ರಸ್ಥಾನ, ಪಾದಪ್ರಸ್ಥಾನ ಮತ್ತು ಶುದ್ಧತರ್ಕಗಳ ಎಲ್ಲ ಕ್ಷೇತ್ರಗಳಲ್ಲಿಯೂ ಚರಿತ್ರಾರ್ಹವಾದ ಕೊಡುಗೆಗಳನ್ನು ಕೊಟ್ಟು ಇಂದಿಗೆ ಐದು ಶತಮಾನಗಳು ಕಳೆದಿವೆ. ಮಾಧ್ವ ಪರಂಪರೆ ಹಾಗೂ ಅದರ ಅನುಯಾಯಿಗಳು ಮುಳಬಾಗಿಲು ವಿಶ್ವವಿದ್ಯಾಲಯದಲ್ಲಿ ಶ್ರೀಪಾದರಾಜರಲ್ಲಿ ಇನ್ನೂ ವಿದ್ಯಾರ್ಥಿಯಾಗಿ ಇರುವಾಗಲೆ ವ್ಯಾಸತೀರ್ಥರ ಬಗ್ಗೆ ನವ್ಯ ನ್ಯಾಯದ ಮಹಾ ವಿದ್ವಾಂಸನಾದ ಪಕ್ಷಧರಮಿಶ್ರನು ಮಾಡಿದ ಉತ್ತಮ ಪ್ರಶಂಸೆಯನ್ನು ಪುನಃ ಪುನಃ ಉಚ್ಚರಿಸುತ್ತ ತೃಪ್ತಿಪಡುತ್ತಿದ್ದಾರೆ. ಆದರೆ ವ್ಯಾಸತೀರ್ಥರ ಉತ್ಕೃಷ್ಟ ತರ್ಕಗ್ರಂಥವಾದ ತರ್ಕತಾಂಡವವು ಇನ್ನೂ ಗೌಡನೈಯಾಯಿಕರನೇಕರಿಗೆ ಅಜ್ಞಾತವಾಗಿಯೆ ಇದೆ. ಗಂಗೇಶನ ತತ್ವ ಚಿಂತಾಮಣಿಯ ಮತ್ತು ಅವಕ್ಕೆ ಪಕ್ಷಧರಮಿಶ್ರನು ಬರೆದ ವ್ಯಾಖ್ಯಾನವನ್ನು ಬಿಡದೆ ಎಲ್ಲ ವ್ಯಾಖ್ಯಾನಗಳ ಖಂಡನಾತ್ಮಕ ವಿವೇಚನೆ ತರ್ಕತಾಂಡವದಲ್ಲಿದ್ದು ಅದು ಉತ್ತರದೇಶದ ತರ್ಕವಾಗೀಶರುಗಳಿಗಾಗಲಿ ತರ್ಕಪಂಚಾನನರಿಗಾಗಲಿ ತಿಳಿದುಬರದಂತೆ ಭದ್ರವಾಗಿ ಕಟ್ಟಿಟ್ಟ ಪುಸ್ತಕವಾಗಿ ಹೋಗಿದೆ. ಅದರ ವಿಮರ್ಶೆ ಅವರ ಯಾವ ಕೃತಿಗಳಲ್ಲಿಯೂ ಕಂಡು ಬರುವುದಿಲ್ಲ. ಉತ್ತರ ದೇಶದ ತಾರ್ಕಿಕರ, ಭಟ್ಟಾಚಾರ್ಯರುಗಳ ಈ ದೃಷ್ಟಿಕೋನವು ಪರಿಷ್ಕಾರ ಕ್ರೋಡ ಪತ್ರಗಳ ಹೆಸರಿನಲ್ಲಿ ಕೇವಲ ಶಬ್ದಜಾಲದ ಹುಲುಸಾದ ಬೆಳೆ ತಂದುಕೊಟ್ಟು ನವ್ಯನ್ಯಾಯದ ಮುಂದಿನ ಬೆಳವಣಿಗೆಯ ಮೇಲೆಯೇ ವಿನಾಶಕಾರಿ ಪರಿಣಾಮ ತಂದಿತು. ಪಶ್ಚಿಮದಲ್ಲಿ ತರ್ಕದ ಅಧ್ಯಯನವು ಪ್ಲೇಟೋ ಅರಿಸ್ಟಾಟಲ್‌ಗಳ ಪ್ರಾಚೀನವಾದುದು. ಆಧುನಿಕ ಕಾಲದ ಬರ್ಟ್ರೆಂಡ್‌ರಸ್ಸೆಲ್‌ನಂತ ತೀವ್ರ ಬುದ್ಧಿ ಶಕ್ತಿಯ ವಿದ್ವಾಂಸರುಗಳ ಕೃತಿಗಳಿಂದ ಅನೇಕ ಶತಮಾನಗಳಷ್ಟು ಕಾಲ ಪಾಶ್ಚಾತ್ಯ ತರ್ಕಶಾಸ್ತ್ರ ತುಂಬ ಪ್ರಗತಿಸಾಧಿಸಿದೆ. ಪಶ್ಚಿಮದಲ್ಲಿ 'ಸಿಂಬಾಲಿಕ್ ಲಾಜಿಕ್' ಸೇರಿದಂತೆ ಎಲ್ಲ ಮುಖಗಳಲ್ಲಿಯೂ ಆಧುನಿಕ ತರ್ಕಶಾಸ್ತ್ರ ಮುಂದುವರಿದಿದೆ. ಅದಕ್ಕೆ ಹೋಲಿಸಿದರೆ ನಮ್ಮ ಪ್ರಾಚೀನ ಭಾರತೀಯ ತರ್ಕಶಾಸ್ತ್ರವಿನ್ನೂ ನಿಂತಲ್ಲೇ ನಿಂತಿದೆ. ಆದರ ಅಧ್ಯಯನವು ಮಠಗಳಲ್ಲಿ ಮಾತ್ರವಿದ್ದು ದಿನನಿತ್ಯ ಬೆಳೆಯುತ್ತಿರುವ ನಮ್ಮ ಅನೇಕ ವಿಶ್ವವಿದ್ಯಾನಿಲಯಗಳ ತತ್ವಜ್ಞಾನ ತರ್ಕಶಾಸ್ತ್ರ ವಿಭಾಗಗಳು ಎರಡನೆ ದರ್ಜೆ

ಯ ಪ್ರಜೆಯಾಗಿ ಕಾಣಲ್ಪಡುತ್ತಿದೆ. ಆಧುನಿಕ ತರ್ಕಶಾಸ್ತ್ರ ಜೆಟ್ ವಿಮಾನದ ಯುಗದಲ್ಲಿದ್ದರೆ ನಮ್ಮದು ಎತ್ತಿನ ಬಂಡಿಯ ವೇಗದಲ್ಲಿ ಸರಿಯುತ್ತಿದೆ.

ಉತ್ತರಭಾರತದ ವಿಶ್ವವಿದ್ಯಾಲಯಗಳ ಸ್ನಾತಕೋತ್ತರ ವ್ಯಾಸಂಗದಲ್ಲಿ ಮಾಧ್ವ ತತ್ವಜ್ಞಾನವು ಒಂದು ವಿಷಯವಾಗಿಯೆ ಇಲ್ಲ, ಇಡಿ ಭಾರತದಲ್ಲಿ ಎಲ್ಲಿಯೂ, ನಮ್ಮ ಯಾವುದೆ ವಿಶ್ವವಿದ್ಯಾಲಯದಲ್ಲಿಯೂ ಮಾಧ್ವ ತತ್ವಜ್ಞಾನದ ವಿಭಾಗವೆಂಬುದಿಲ್ಲ, ಏಕೆ ?

ಪ್ರಾಚೀನ ಪದ್ಧತಿಯಲ್ಲಿ ಅಭ್ಯಾಸ ಮಾಡಿದ ಕೆಲವಾದರೂ ಬುದ್ಧಿವಂತರನ್ನು ಆಂಗ್ಲಮಾಧ್ಯಮದ ಕ್ರಮಬದ್ಧ ವಿಶ್ವವಿದ್ಯಾಲಯ ವ್ಯಾಸಂಗಕ್ಕೆ ಆರಿಸಿ, ಅವರು ಪಾಶ್ಚಾತ್ಯ ತತ್ವಶಾಸ್ತ್ರ ಹಾಗೂ ತರ್ಕಗಳಲ್ಲಿ ಪೂರ್ಣ ಪ್ರಮಾಣದ ಶಿಕ್ಷಣ ಪಡೆಯಲು ಮತ್ತೆ ಧನಸಹಾಯ ಮಾಡಿ. ನಮ್ಮ ವಿಶ್ವವಿದ್ಯಾಲಯಗಳಲ್ಲಿ ಜವಾಬ್ದಾರಿಯುತ ಸ್ಥಾನವನ್ನು ಅವರು ಪಡೆಯಲು ಮತ್ತು ದ್ವೈತ ವೇದಾಂತವು ಬೌದ್ಧಿಕ ಕ್ಷೇತ್ರದಲ್ಲಿ ಉಳಿದ ದರ್ಶನಗಳೊಂದಿಗೆ ಸರಿಸಾಟಿಯಾಗಿ ಸ್ಪರ್ಧಿಸಲು ಶಕ್ಯವಾಗುವಂತೆ ಮಧ್ವ, ಜಯತೀರ್ಥ, ವ್ಯಾಸತೀರ್ಥರುಗಳ ಉದ್ಗ್ರಂಥಗಳನ್ನು ಸ್ನಾತಕೋತ್ತರ ಅಧ್ಯಯನ ಸಂಶೋಧನ ಕ್ರಮಕ್ಕೆ ಅಳವಡಿಸಿಕೊಳ್ಳುವಲ್ಲಿ ತಮ್ಮದೆ ಆದ ಕೊಡುಗೆ ಕೊಡಲು ಅನುಕೂಲ ಮಾಡಿಕೊಡಬಾರದೇಕೆ ? ನಮ್ಮ ಯುವ ಜನಾಂಗದಲ್ಲಿ ಒಳ್ಳೆಯ ನುರಿತ ಬುದ್ಧಿವಂತ ಯುವಕರಿರುವಾಗ ವ್ಯಾಸತೀರ್ಥರ ನ್ಯಾಯಾಮೃತ ತರ್ಕತಾಂಡವಗಳಂಥ ಪ್ರೌಢ ಗ್ರಂಥಗಳ ಪ್ರಾಮಾಣಿಕ ಅನುವಾದಗಳು ಸಿಗುವ ಭರವಸೆ ಇಟ್ಟುಕೊಳ್ಳಲು ಅಡ್ಡಿ ಇಲ್ಲ. ಹಿಂದೊಮ್ಮೆ ಇಪ್ಪತ್ತು ಲಕ್ಷ ರೂಪಾಯಿಗಳ ನಿಧಿ ಸಂಗ್ರಹಿಸಿ ದತ್ತಿಯಾಗಿಟ್ಟರೆ ಒಂದು ಮಾಧ್ವ ದರ್ಶನ ಪೀಠವನ್ನು ಸ್ಥಾಪಿಸುವುದಾಗಿ ಮದ್ರಾಸು ವಿಶ್ವವಿದ್ಯಾನಿಲಯವು ವಾಗ್ದಾನ ಮಾಡಿತ್ತು. 'ಹಿಂದು' ಪತ್ರಿಕೆಯ ವರದಿ ಪ್ರಕಾರ ಈ ಮಠಗಳೆಲ್ಲ ಸೇರಿ ಸಂಗ್ರಹಿಸಿದರೆ ಉಳಿವ ಅರ್ಧವನ್ನು ಶ್ರೀಮಂತ ಹಾಗೂ ಜನೋಪಕಾರಿಗಳು ಸಂಗ್ರಹಿಸಿ ಕೊಡಬಲ್ಲರು. ಈ ಇಪ್ಪತ್ತನೆ ಶತಮಾನ ಪೂರ್ತಿಯಾಗುವುದರೊಳಗಾಗಿ ಭಾರತ ದೇಶದಲ್ಲಿ ಒಂದು ವಿಶ್ವವಿದ್ಯಾಲಯದಲ್ಲಿಯಾದರೂ ಮಾಧ್ವ ತತ್ವಜ್ಞಾನ ಪೀಠವನ್ನು ಸ್ಥಾಪಿಸುವಂತೆ ಮಾಧ್ವ ಮಠಗಳಿಗೂ ಮಾಧ್ವ ಜನತೆಗೂ ವ್ಯಾಸರಾಜರ ಪಂಚಶತಾಬ್ದಿ ವರ್ಷವು ಸ್ಫೂರ್ತಿ ನೀಡಲಿ. ವ್ಯಾಸರಾಜರ ಆತ್ಮಕ್ಕೆ ಅದರಿಂದ ಬಹಳ ತೃಪ್ತಿ ಉಂಟಾದೀತು.

# ವ್ಯಾಸತೀರ್ಥರ ಶಿಷ್ಯ ಸಂಪತ್ತು

—ಶ್ರೀ ವೇಣುಗೋಪಾಲದಾಸರ 'ಶ್ರೀವ್ಯಾಸರಾಜ
ಗುರುಸಾರ್ವಭೌಮರು' ಕೃತಿಯಿಂದ ಸಂಗ್ರಹೀತ.

**ವಿಜಯೀಂದ್ರರು ;** ಇವರು ವ್ಯಾಸರಾಜರ ಪೂರ್ವಾಶ್ರಮದ ಅಣ್ಣನಾದ ಮಧ್ವಪತಿ ದೇವನ ಪುತ್ರರು. ವಿಠಲಾಚಾರ್ಯರೆಂದು ಆಗಿನ ಹೆಸರು. ಉಪನೀತರಾದ ವೇಳೆ ವೇದ, ವೇದಾಂಗ ಪಾಠಗಳನ್ನು ಹೇಳಿ ಇವರಿಗೆ ಆಶ್ರಮವನ್ನು ಕೊಟ್ಟು ವಿಷ್ಣುತೀರ್ಥರೆಂದು ಹೆಸರಿಟ್ಟರು, ಇವರು ಒಟ್ಟು 104 ಗ್ರಂಥಗಳನ್ನು ರಚಿಸಿದ್ದರು. ವ್ಯಾಸತೀರ್ಥರಿಂದ ಒಂಬತ್ತು ಬಾರಿ ನ್ಯಾಯ ಸುಧಾ ಪಾಠವನ್ನು ಕೇಳಿದ ಮಹಾ ಪ್ರಾಜ್ಞರು ಇವರು ಎಂದು ಸೇತುಮಾಧವ ಸೂರಿಗಳು ಹೇಳಿದ್ದಾರೆ. ಇವರನ್ನು 'ರಾಘವೇಂದ್ರ ಮಠವ' ಗುರುಗಳಾಗಿದ್ದ ಸುರೇಂದ್ರತೀರ್ಥರಿಗೆ ಒಪ್ಪಿಸಿದರು. ಇವರು ವ್ಯಾಸರಾಜಾಭ್ಯುದಯಂ ಎಂಬ ಚರಿತ್ರೆ, (ಅನುಪಲಬ್ಧ), ವ್ಯಾಸರಾಜ ಸ್ತೋತ್ರ, ಮತ್ತು ಕನ್ನಡದಲ್ಲೊಂದು ದೇವರ ನಾಮವನ್ನು ವ್ಯಾಸರಾಜರ ಬಗ್ಗೆ ಬರೆದಿದ್ದಾರೆ.

**ಶ್ರೀವಾದಿರಾಜರು :** 'ಧರೆಯೊಳು ವಿಜಯೀಂದ್ರ ವಾದಿರಾಜರೆಂಬ ಪರಮ ಶಿಷ್ಯರ ಪಡೆದು ಮೆರೆವ ಕೀರುತಿಯುಳ್ಳ' ಎಂದು ಪುರಂದರದಾಸರು ವಾದಿರಾಜರು ವ್ಯಾಸ ತೀರ್ಥರ ಶಿಷ್ಯರಾಗಿದ್ದರೆಂದು ಹೇಳುತ್ತಾರೆ. ಸ್ವತಃ ವಾದಿರಾಜರೇ ತಮ್ಮ 'ಪ್ರಮೇಯ ನವಮಾಲಿಕಾ' ಎಂಬ ಗ್ರಂಥದಲ್ಲಿ-'ವ್ಯಾಸತೀರ್ಥ ಗುರೂನ್ ನತ್ವಾ ಪರಪಕ್ಷವಿದಾರಣಾನ್' ॥ ಮತ್ತು 'ವ್ಯಾಸತೀರ್ಥಕೃಪಾಲೇಶಾತ್ ಸಾಧಿತಂ ದುರ್ಗಮಾ ಮಯಾ' ಎಂದೂ ಶ್ರೀಪಾದರಾಜರನ್ನು ಸ್ತುತಿಸುವ ಪದ್ಯಷಟ್ಕದಲ್ಲಿ—ಶ್ರೀವ್ಯಾಸರಾಜಶಿಷ್ಯ ಗಣರ್ಷಭೇಣ । ಶ್ರೀವಾದಿರಾಜಯತಿನಾ ರಚಿತಂ ಹಿ ಶಶ್ವತ್ ॥ ಎಂದೂ ವ್ಯಾಸರಾಜರ ಶಿಷ್ಯತ್ವವನ್ನು ತಮಗೆ ಹೇಳಿಕೊಂಡಿದ್ದಾರೆ. ಇದಲ್ಲದೆ ವಾದಿರಾಜರು ವ್ಯಾಸರಾಯರನ್ನು ನಾಲ್ಕು ದೇವರನಾಮಗಳಿಂದ ಸ್ತುತಿಸಿದ್ದಾರೆ.

ಮಧ್ವಕವಿ ಎಂಬ ಆರೂಣಿ ರಾಜಪುರೋಹಿತರು ವಾದಿರಾಜರ ಶಿಷ್ಯರು. ಇವರ ವಿಜಯೀಂದ್ರ ವಿಜಯ ಗ್ರಂಥವಲ್ಲಿ ಹೀಗಿದೆ—'ವಾದಿರಾಜೋಜಯೀಂದ್ರಶ್ಚ ವ್ಯಾಸ ಶಿಷ್ಯೌ ಯತೀಶ್ವರೌ'.

**ಶ್ರೀನಿವಾಸತೀರ್ಥರು :** ಇವರು ವ್ಯಾಸರಾಜರ ಪೂರ್ವಾಶ್ರಮದ ಅಕ್ಕನಾದ ಭೀಮಕ್ಕನ ಪುತ್ರರೆನ್ನುವರು. ವ್ಯಾಸರಾಜರಲ್ಲಿ ಓದಿ ಮುಂದೆ ಪಟ್ಟಕ್ಕೆ ಬಂದು ಕ್ರಿ.ಶ. 1539 ರಿಂದ 1564 ರವರೆಗೆ ಪಟ್ಟವಾಳಿದರು. ಆಗ ವಿದ್ಯಾನಗರದ ವಿಶ್ವವಿದ್ಯಾನಿಲಯದ ಮತ್ತು ತಿರುಪತಿ ದೇವಾಲಯದ ಅಧ್ಯಕ್ಷರೂ ಆಗಿದ್ದರು. ಇವರ ವೃಂದಾವನ ವ್ಯಾಸರಾಜರ ವೃಂದಾವನದ ಸಮೀಪದಲ್ಲೇ ಇರುವುದು.

**ಶ್ರೀನಾರಾಯಣತೀರ್ಥರು :** ಇವರು ಆರ್ಯ ಅಕ್ಷೋಭ್ಯತೀರ್ಥಮಠದ ಪೀಠಿಗೆಯಲ್ಲಿ ಹತ್ತನೇಯವರು. ಇವರ ಆಶ್ರಮ ಗುರುಗಳು ಶ್ರೀ ರಘುಪತಿ ತೀರ್ಥರು. ಕೂಡ್ಲಿ ಬಾಳಗಾರು ಉಭಯ ಮಠಗಳಿಗೂ ಏಕಕಾಲದಲ್ಲಿ ಆಧಿಪತಿಗಳಾಗಿದ್ದರು. ವ್ಯಾಸರಾಜರಲ್ಲಿ ಸಮಗ್ರ ಮಧ್ವಶಾಸ್ತ್ರವನ್ನು ಅಭ್ಯಾಸಮಾಡಿದರು. ಶ್ರೀಕೃಷ್ಣದೇವರಾಯನಿಂದ ಅನೇಕ ಗ್ರಾಮಗಳನ್ನು ದಾನವಾಗಿ ಪಡೆದುದಲ್ಲದೆ ಸ್ವತಃ ವ್ಯಾಸರಾಯರೇ ತಮಗೆ ದೊರೆತ ಗ್ರಾಮಗಳಲ್ಲಿ ಹಲವನ್ನು ಇವರಿಗೆ ಕೊಟ್ಟಿದ್ದಾರೆ. ವಾಗ್ಗೇಯಕಾರರಲ್ಲದೆ ಹನ್ನೆರಡು ಸಂಸ್ಕೃತ ಗ್ರಂಥಗಳನ್ನು ಪಾರಿಜಾತಾಪಹರಣವೆಂಬ ಒಂದು ತೆಲುಗು ನಾಟಕವನ್ನೂ ಬರೆದಿದ್ದಾರೆ ವ್ಯಾಸರಾಜರು ತಾವೇ ರಚಿಸಿದ ಗೋಪಾಲಕೃಷ್ಣ ಪ್ರತಿಮೆಯನ್ನು ಇವರಿಗೆ ಕೊಟ್ಟರು.

**ಶ್ರೀಗೋವಿಂದ ಒಡೆಯರು :** ಇವರು ಹಂಪೆ ನಿವಾಸಿಗಳು, ಅದ್ವೈತಸನ್ಯಾಸಿಗಳಾಗಿದ್ದು ವ್ಯಾಸರಾಜರೊಂದಿಗೆ ಹದಿನೆಂಟು ದಿನ ವಾದಮಾಡಿ ಸೋತು ದ್ವೈತಮತಾವಲಂಬಿಗಳಾದರು. ವ್ಯಾಸಯೋಗಿಗಳು ಅವರಿಗೆ ದಂಡಪಲ್ಲಟಾದಿಗಳನ್ನು ಮಾಡಿಸಿ ಪುನಃ ಸನ್ಯಾಸದೀಕ್ಷೆಯನ್ನಿತ್ತು ತಪ್ತ ಮುದ್ರಾಂಕನವನ್ನು ಮಾಡಿದರು. ಗುರುಗಳಿಂದ ದಾಸದೀಕ್ಷೆಯನ್ನು ಪಡೆದು 'ಗುರು ಮುದ್ದುಕೃಷ್ಣ' ಎಂಬ ಅಂಕಿತದಿಂದ ಪದಪದ್ಯ ಸುಳಾದಿಗಳನ್ನು ರಚಿಸಿದರು. ಗುರುಗಳ ಅಜ್ಞೆಯಂತೆ ಗೋವಿಂದತೀರ್ಥರು ತುಂಗಭದ್ರೆಯ ದಂಡೆಯಲ್ಲಿ ಪದ್ಮನಾಭತೀರ್ಥರ ಬೃಂದಾವನ ಸನ್ನಿಧಿಯಲ್ಲಿ ಹರಿಧ್ಯಾನಪರರಾದರು ಇದಲ್ಲದೆ ಕೇಶವಾದಿ ಚತುರ್ವಿಂಶತಿ ನಾಮಗಳುಳ್ಳ 24 ಮಂದಿ ಯತಿಗಳು ಮತ್ತು ರವೀಂದ್ರರೆಂಬುವರು ವ್ಯಾಸರಾಜರ ಶಿಷ್ಯರಾಗಿದ್ದರು ಎಂದು ವ್ಯಾಸಯೋಗಿ ಚರಿತೆಯಲ್ಲಿದೆ.

**ಶ್ರೀಪುರಂದರದಾಸರು :** ಇವರು ವ್ಯಾಸರಾಯರ ಗೃಹಸ್ಥಶಿಷ್ಯರಲ್ಲಿ ಪ್ರಧಾನರು. ಒಂಭತ್ತುಕೋಟಿ ಧನ ಸಂಪತ್ತನ್ನು ಬಿಟ್ಟು ವಿರಕ್ತಿ ಹೊಂದಿ ವೈಷ್ಣವದೀಕ್ಷೆಯನ್ನು ಪಡೆದವರು. 'ಗುರುವ್ಯಾಸರಾಯರು ಕರುಣದಿಂದೆನಗೆ, ಪರಮಹಾಮಂತ್ರಗಳ ಉಪದೇಶಿಸಿದರು॥' 'ಅಂಕಿತವೆನಗಿತ್ತ ಗುರುವ್ಯಾಸಮುನಿರಾಯ' ಎಂದು ವ್ಯಾಸರಾಯರನ್ನು ತಮ್ಮ ಗುರುಗಳೆಂದು ಹೇಳಿಕೊಂಡಿದ್ದಾರೆ.

**ಕನಕದಾಸರು :** ಅಂಡೆಕುರುಬ ಜಾತಿಯಲ್ಲಿ ಹುಟ್ಟಿದ ಇವರ ಹೆಸರು ತಿಮ್ಮ.

ಭೂಮಿಯಲ್ಲಿ ಹೂಳಿಟ್ಟ ನಿಧಿ ಕಾಣಿಸಿದ್ದರಿಂದ ಕನಕರಾದರು. 'ಮೋಹನ ತರಂಗಿಣಿ' ಎಂಬ ಕಾವ್ಯದಲ್ಲಿ ಹೇಳಿಕೊಂಡಿರುವಂತೆ ಇವರು ಮೊದಲು ಶ್ರೀವೈಷ್ಣವ ಸಂಪ್ರದಾಯಸ್ಥರು, ವಿಜಯನಗರದ ಸಾರ್ವಭೌಮನ ಅಧೀನವಾಗಿ ಬಂಕಾಪುರಕ್ಕೆ ಒಡೆಯರಾಗಿದ್ದರು. ಶತ್ರುಗಳು ರಣರಂಗದಲ್ಲಿ ಸಂಹರಿಸಿದಾಗ ಶ್ರೀಹರಿಯು ಪ್ರಾಣದಾನ ಮಾಡಿ ವ್ಯಾಸರಾಯರ ಶಿಷ್ಯನಾಗುವಂತೆ ಅಪ್ಪಣೆಕೊಡಿಸಿದ. ಇದನ್ನು ಪೂಜ್ಯಭಾವನೆಯಿಂದ ವ್ಯಾಸರಾಯರ ಹೆಸರೆತ್ತಿ ಹೇಳದೆ ಕನಕ ಸ್ಮರಿಸಿಕೊಂಡಿದ್ದಾನೆ- 'ಪರಮ ಮೂರ್ಖನು ನಾನು ವರ ವೀರವೈಷ್ಣವರ । ಚರಣವನು ಸೇರಿಸಿದೆ ಹರಿಯೆ'

'ಅಂಧಂತಮಸ್ಸಿನ್ನಾರಿಗೆ ಗೋವಿಂದನ ನಿಂದಿಸುವವರಿಗೆ, ಶೇಷಶಯನಾದಿ ಕೇಶವರಾಯನ ದಾಸರೊಡನಾಡದ ಮಧ್ವದ್ವೇಷಿಗಳಿಗಲ್ಲದೆ' 'ಸಿರಿ ಊರ್ಧ್ವಪುಂಡ್ರ ದ್ವಾದಶನಾಮವಿಡುವವರ ಪರಿಚಾರಕರ ಪರಿಚಾರಕನೆನಿಸೆನ್ನ.' 'ಪರಮ ಪದವೀವ ಗುರುಮುಖ್ಯಪ್ರಾಣ' ಎಂಬ ಪದ್ಯದಲ್ಲಿ ವಾಯುದೇವರ ಅವತಾರತ್ರಯದ ವರ್ಣನೆಯಿದೆ. ಆದ್ದರಿಂದ ಕನಕ ಮಾಧ್ವ ಪಂಥೀಯನಾಗಿದ್ದ

**ಕುಮಾರವ್ಯಾಸ :** ಡಾ.ಆರ್.ಎಸ್. ಪಂಚಮುಖಿಯವರು ಹೇಳುವಂತೆ ಕುಮಾರವ್ಯಾಸ ಹದಿನಾರನೇ ಶತಮಾನದವನು.ಕವಿ ರಾಘವೇಂದ್ರಪ್ಪ ಹೇಳುತ್ತಾನೆ-'ಕುಮಾರವ್ಯಾಸ ಮೊದಲು ಅದ್ವೈತಿ. ಅಶ್ವತ್ಥಾಮನ ಅನುಗ್ರಹದಿಂದ ಕನ್ನಡ ಭಾರತ ರಚಿಸಿ ಗುರುವ್ಯಾಸರಾಯರಿಗಿತ್ತು ಮುದ್ರಾಧಾರಣೆ ಮಾಡಿಸಿಕೊಂಡ' ಎಂದು. ಕುಮಾರವ್ಯಾಸನೂ ಭಾರತದ ಪ್ರತಿಪರ್ವ ಸಮಾಪ್ತಿಯಲ್ಲಿ 'ಶ್ರೀಮತ್ಕುಮಾರ ವ್ಯಾಸಯೋಗೀಂದ್ರ ವಿರಚಿತಮಪ್ಪ' ಎನ್ನುತ್ತಾನೆ. ಅದಕ್ಕೆ 'ವ್ಯಾಸಯೋಗೀಂದ್ರಕುಮಾರ' ಎಂದು ವ್ಯಾಖ್ಯಾನ ಮಾಡಿದ್ದಾನೆ ಕುಮಾರ ವಾಲ್ಮೀಕಿ. ಅಲ್ಲದೆ ಕವಿಯು ವ್ಯಾಸರಾಜರ ಚರಿತ್ರೆ ಬರೆದಿರುವನೆಂದು ಅದನ್ನು ಶೋಧಿಸಿ ಸಂಪಾದನೆ ಮಾಡಿರವುದಾಗಿಯೂ ರಾಘವೇಂದ್ರಪ್ಪ ಹೇಳುತ್ತಾನೆ. ಹೀಗೆ ಕುಮಾರ ವ್ಯಾಸನೂ ವ್ಯಾಸರಾಯರ ಶಿಷ್ಯ.

**ಕೃಷ್ಣಚೈತನ್ಯ :** ಇವನು ವಂಗದೇಶದವನು. ವಿಶ್ವಂಭರನೆಂದೂ, ಗೌರಾಂಗನೆಂದೂ ಇವನ ಪೂರ್ವಾಶ್ರಮದ ಹೆಸರು. ಚೈತನ್ಯದೇವನೆಂದೂ ಆಶ್ರಮನಾಮ. ಉಡುಪಿಗೆ ಬಂದು ಪರ್ಯಾಯ ಪೀಠಸ್ಥರಾಗಿದ್ದ ರಘುವರ್ಯರೊಂದಿಗೆ ಭಕ್ತಿಯೋಗದ ಬಗ್ಗೆ ಚರ್ಚೆ ನಡೆಸಿದ್ದ. ವಿಜಯನಗರಕ್ಕೆ ಬಂದು ವ್ಯಾಸತೀರ್ಥರಿಂದ ಮಾಧ್ವವೇದಾಂತವನ್ನು ಅಧ್ಯಯನ ಮಾಡಿದ. ಇದು ರಾಘವೇಂದ್ರಪ್ಪನ ನಿರೂಪಣೆ.

ಹೀಗೆ ಅನೇಕ ಪ್ರಸಿದ್ಧ ಸನ್ಯಾಸಿಗಳೂ ಗೃಹಸ್ಥರೂ, ಕವಿಗಳೂ ವ್ಯಾಸತೀರ್ಥರ ಶಿಷ್ಯರಾಗಿದ್ದರು.

# ಕುಹುಯೋಗವೆಂದರೆ

—ಶ್ರೀರಾಮ ವಿಠಲ

ಮೈಸೂರು ಸಂಸ್ಥಾನದ ಆಸ್ಥಾನ ಪಂಡಿತ ಮಂಡಲ್ ರಾಮಾಶಾಸ್ತ್ರಿಗಳು ಹೇಳುತ್ತಾರೆ—

ಕುಹೂಯೋಗೋ ನಾಮ ಪರ್ವಪ್ರತಿಪತ್ ಸಂಧೌ ವಿಷಘಟಿಕಾಯುಕ್ತೇ
ನಷ್ಟೇಂದುಕಲೇ ಯತ್ರಕಾಲೇ ಚತ್ವಾರೋ ಗ್ರಹಾಃ ಚಂಡಾಲಯೋಗಂ
ಪ್ರಾಪ್ಯ ದ್ವಾದಶಸ್ಥಾಃ ಸ ಇತಿ ಪರಿಭಾಷಿತಃ । ತದುಕ್ತಂ ಜ್ಯೋತಿಃ ಸಾರ
ಸಂಗ್ರಹೇ– ರಾಹುಶನ್ಯರ್ಕಭೂಪುತ್ರಾಃ ಯದಾ ಚಂಡಾಲತಾಂ ಗತಾಃ ।
ತತ್ರ ದ್ವಾದಶಗಾತ್ಸದ್ಯಃ ಸ ರಾಜಾ ನಶ್ಯತಿ ಧ್ರುವಂ ॥

ಶನಿ, ಸೂರ್ಯ, ಅಂಗಾರಕ ಮತ್ತು ರಾಹುಗಳು ಚಂಡಾಲತ್ವವನ್ನು ಪಡೆದು ಜಾತಕನ ಜನ್ಮರಾಶಿಯಿಂದ ದ್ವಾದಶದಲ್ಲಿದ್ದರೆ ಕುಹುಯೋಗ (ಶುಕ್ಲಪಕ್ಷದ ಪಾಡ್ಯ ಪ್ರಾರಂಭವಾಗುವ ಸಂಧಿಕಾಲದಲ್ಲಿ).

ಮೈಸೂರು ಆಸ್ಥಾನ ವಿದ್ವಾಂಸರಾಗಿದ್ದ ಕಾನಕಾನಹಳ್ಳಿ ಶ್ರೀ ನರಸಿಂಹಶಾಸ್ತ್ರಿಗಳು ಕುಹುಯೋಗದ ಲಕ್ಷಣ ಹೀಗೆ ಹೇಳುತ್ತಾರೆ—

ದ್ವಾದಶಾಷ್ಟಮ ಜನ್ಮಸ್ಥಾಃ ಶನ್ಯರ್ಕಾಂಗರಕಾಃ ಗುರುಃ ।
ಕುರ್ವಂತಿ ಪ್ರಾಣ ಸಂದೇಹಂ ದೇಶತ್ಯಾಗಂ ಧನಕ್ಷಯಂ ॥

ಶನಿ, ಸೂರ್ಯ, ಅಂಗಾರಕ ಮತ್ತು ಗುರುಗ್ರಹಗಳು ಲಗ್ನಕ್ಕಿಂತ ಹನ್ನೆರಡು ಅಥವಾ ಎರಡನೇ ಸ್ಥಾನದಲ್ಲಿದ್ದರೆ ಕುಹುಯೋಗ.

ಕೃಷ್ಣದೇವರಾಯನ ನಕ್ಷತ್ರ ಶತಭಿಷಾ. ಕುಂಭರಾಶಿ. ಇದರ ಪ್ರಕಾರ, ಮೊದಲನೆಯ ಲಕ್ಷಣವನ್ನು ಇಟ್ಟುಕೊಂಡರೆ ತಾ. 4-2-1524ರಂದು ಕೃಷ್ಣದೇವ ರಾಯನಿಗೆ ಕುಹುಯೋಗವಾಗುತ್ತದೆ.

ವಿದ್ಯಾರತ್ನಾಕರತೀರ್ಥರು ರಚಿಸಿದ ಕಾವ್ಯದಲ್ಲಿ—ಅಬ್ದೇ ವಿಕ್ರಮನಾಮಕೇಽಂತಿ ಮದಿನೇ ಮಾಘಸ್ಯ ಕೃಷ್ಣಾಭಿದಂ । ಎಂದಿದೆ. ವಿಕ್ರಮ ಸಂವತ್ಸರದ ಮಾಘ ಕೃಷ್ಣ ಅಮಾವಾಸ್ಯೆ ಅಂದರೆ ಕ್ರಿ. ಶ. 18-2-1521 ರಂದು ಕುಹುಯೋಗ. ಮೇಲಿನ ಎರಡನೇ ಲಕ್ಷಣದ ಪ್ರಕಾರ ಈ ದಿನಾಂಕ ಸರಿಹೊಂದುತ್ತದೆ.

ಇನ್ನು ಮದ್ರಾಸಿನ ಎಪಿಗ್ರಾಫಿಕ್ ವರದಿ ಪ್ರಕಾರ ಕೃಷ್ಣದೇವರಾಯನ ಜನ್ಮ ನಕ್ಷತ್ರ ಜ್ಯೇಷ್ಠ. ರಾಶಿ ವೃಶ್ಚಿಕ. 1519 ರಿಂದ 1524ರ ವರೆಗೆ ಕುಹುಯೋಗ ಈ ನಕ್ಷತ್ರಕ್ಕೆ ಆರು ಬಾರಿ ಬರುತ್ತದೆ. ಆದರೆ ಹಿಂದೆ ಹೇಳಿದ ದಿನಾಂಕ ಮತ್ತು ತಿಂಗಳಿನಲ್ಲಿ ಈ ಯೋಗ ಬರುವುದಿಲ್ಲ.

ನವವೃಂದಾವನದಲ್ಲಿ

# ಶ್ರೀ ಮದ್ವ್ಯಾಸರಾಜರು



ನಮೋ ವ್ಯಾಸಮುನೀಂದ್ರಾಯ ಭಕ್ತಾಭೀಷ್ಟಪ್ರದಾಯಿನೇ

ನಮತಾಂ ಕಲ್ಪತರವೇ ಭಜತಾಂ ಕಾಮಧೇನವೇ ॥

## ಶಿಷ್ಯ ಪ್ರಶಂಸೆ

ರಾಗಃ ಪಂತುವರಾಳ                    ತಾಳಃ ಏಕ

ಸಾಸಿರಜಿಹ್ವೆಗಳುಳ್ಳ ಶೇಷನೆ ಕೊಂಡಾಡಬೇಕು
ವ್ಯಾಸರಾಯರ ಸನ್ಯಾಸದಿರವ ॥ಪಲ್ಲ॥

ಆಶೆಯಿಂದ ತಮ್ಮುದರ ಪೋಷಣಕಾಗಿ ಧಪ್ಪನ್ನ
ದೇಶವ ತಿರುಗಿ ಸಂಚಾರ ಮಾಡುತ
ಮೀಸಲ ಮಡಿ ಬಚ್ಚಿಟ್ಟು ಮಿಂಚುಕೊಳನುಂಡು ದಿನ
ಮೋಸವಮಾಡಿ ಕಳೆವ ಸನ್ಯಾಸಿಗಳ ಸರಿಯೆ ॥೧॥

ಕೆರೆ ಭಾವಿ ಪುರ ಅಗ್ರಹಾರಂಗಳ ಮಾಡಿ ಭೂ
ಸುರರೊಂದು ಲಕ್ಷ ಕುಟುಂಬಗಳ
ಪೊರೆವ ವೈಭವ ಕೀರ್ತಿಯಿಂದಲಿ ವ್ಯಾಸರಾ
ಯರ ಗುಣಗಳ ಗಾಂಭೀರ್ಯಾದಿಗಳ ॥೨॥

ಹಗಲಿರುಳೆನ್ನದೆ ಆವಾಗ ಶ್ರೀಹರಿಪದಪದ್ಮ
ಯುಗಗಳನ್ನರ್ಚಿಸಿ ಭಕುತಿಯಿಂದ
ರಘುಪತಿಭಜಕ ಬ್ರಹ್ಮಣ್ಯತೀರ್ಥರ ಕುವರ
ರಂಗವಿಠಲನನ್ನು ಬಿಡೆಬಿಡೆನು ಎಂಬ ॥೩॥

ಶ್ರೀಪಾದರಾಜರು

# ವ್ಯಾಸರಾಜರು ಮತ್ತು ತಿರುಪತಿ

—ಅರಳುಮಲ್ಲಿಗೆ ಪಾರ್ಥಸಾರಥಿ. ಬಿ ಎ , ಎಂ.ಕಾಂ.

ಸಂಗಮ ವಂಶದ ವಿರೂಪಾಕ್ಷನು ವಿಜಯನಗರದ ಸಾಮ್ರಾಟನಾಗಿದ್ದಾಗ ಸಾಳುವ ನರಸಿಂಹ ಚಂದ್ರಗಿರಿಯ ಅರಸನಾಗಿದ್ದು, ವಿಜಯನಗರದ ಸಾಮಂತ ಪ್ರಭುವಾಗಿದ್ದನು; ಮಂತ್ರವಾದಿಯೊಬ್ಬನು ವಿಜಯನಗರಕ್ಕೆ ಬಂದು, ಉಚ್ಛಿಷ್ಟ ಗಣಪತಿಯ ಉಪಾಸನಾ ಬಲದಿಂದ ಎಲ್ಲ ಪಂಡಿತರನ್ನೂ ಹೀಯಾಳಿಸಿ. ಸೋಲಿಸಿ ಅಪಮಾನಿಸಿದನು. ಪಂಡಿತರಿಂದ ಈ ಬಗ್ಗೆ ದೂರು ಬಂದಾಗ ವಿರೂಪಾಕ್ಷರಾಯನು ಈ ಮಂತ್ರವಾದಿಯನ್ನು ತನ್ನ ಆಸ್ಥಾನಕ್ಕೆ ಸ್ವಾಗತಿಸಿ ವಾಕ್ಯಾರ್ಥವನ್ನೇರ್ಪಡಿಸಿದನು. ಅವನ ಆರ್ಭಟ, ಆಟಾಟೋಪಗಳೆದುರು ಯಾರೂ ನಿಲ್ಲಲಾಗದೆ ಎಲ್ಲ ಶ್ರೀ ವೈಷ್ಣವ ಪಂಡಿತರುಗಳು ತಿರುಪತಿಯಲ್ಲಿದ್ದ ತಿರುಮಲೆ ತಾತಾಚಾರ್ಯರೆಂಬ ವಿದ್ವಾಂಸರನ್ನು ವಿಜಯನಗರಕ್ಕೆ ವಾಕ್ಯಾರ್ಥಕ್ಕಾಗಿ ಕರೆಸಿದರು. ಮಂತ್ರವಾದಿ ತಾತಾಚಾರ್ಯರೊಡನೆ ವಾದ ಮಾಡಲು ಬಂದಾಗ, ಕಚ್ಚೆ ಹಾಕದೆ ಲುಂಗಿ ಉಟ್ಟು ವಾಕ್ಯಾರ್ಥಕ್ಕೆ ಬಂದ. ಅವನನ್ನು ಕಂಡು, ಅವನ ರಹಸ್ಯವನ್ನರಿತು, ಕಚ್ಚೆ ಪಂಚೆ ಉಡದಿರುವವರೊಡನೆ ವಾಕ್ಯಾರ್ಥ, ಸಂಭಾಷಣೆ ಶಾಸ್ತ್ರ ನಿಷಿದ್ಧವೆಂದು ತಾತಾಚಾರ್ಯರು ಹೇಳಿದರು. ದೊರೆಯ ಆಜ್ಞೆಯಂತೆ ಅವನು ಕಚ್ಚೆಯುಟ್ಟೇ ಬರಬೇಕಾಗಿ ಬಂದು, ಇದರಿಂದ ತಾತಾಚಾರ್ಯರು ವಾದದಲ್ಲಿ ಸುಲಭವಾಗಿ ಗೆದ್ದು, ಕಪಿಲ, ಕಣಾದ, ಶೈವ, ಜೈನ, ಬೌದ್ಧ ಮತಗಳನ್ನು ಖಂಡಿಸಿ 'ಪಂಚಮತ ಭಂಜನ' ರೆಂಬ ಕೀರ್ತಿಗೆ ಪಾತ್ರರಾದರು. ತಾತಾಚಾರ್ಯರ ಶಿಷ್ಯನಾಗಿದ್ದ ರಂಗರಾಮಾನುಜರೆಂಬುವರು ರಚಿಸಿರುವ 'ಪ್ರಪನ್ನಾಮೃತ' ಗ್ರಂಥದಲ್ಲಿ–

" ವಿದಾಯ ತಾತಾಚಾರ್ಯಃ ತತ್ ಪಂಚಮತಸ್ಯ ಭಂಜನಂ
ಶ್ರೀ ರಾಮಾನುಜ ಸಿದ್ಧಾಂತ ಮವ್ಯಾಹತ ಮಪಾಲಯತ್ "

—ಎಂದು ಆ ಘಟನೆಗಳನ್ನು ನಿರೂಪಿಸಿದ್ದಾರೆ. ಇದರಿಂದ ಮುಖಭಂಗವಾದ ಮಾಂತ್ರಿಕನು ತನ್ನ ಮಾಂತ್ರಿಕ ಶಕ್ತಿಯಿಂದ ವಿರೂಪಾಕ್ಷ ದೊರೆಯನ್ನು ವಶಪಡಿಸಿ

ಕೊಂಡು ತಾತಾಚಾರ್ಯರನ್ನು ದೊರೆಯು ದ್ವೇಷಿಸುವಂತೆ ಮಾಡಿದನು. ತಾತಾಚಾರ್ಯರು ತಿರುಪತಿಗೆ ಹಿಂತಿರುಗಿದರೂ ಬಿಡದೆ, ಮಂತ್ರವಾದಿಯು ದೊರೆಯನ್ನು ತನ್ನ ಕೈಗೊಂಬೆಯನ್ನಾಗಿ ಮಾಡಿಕೊಂಡು, ತಾತಾಚಾರ್ಯರು ವಿಜಯನಗರಕ್ಕೆ ಬಂದು ಮಾಂತ್ರಿಕನ ಕಾಲಿಗೆ ಬಿದ್ದು ಪಂಚಮತ ಭಂಜನರೆಂಬ ಬಿರುದನ್ನು ಬಿಟ್ಟುಕೊಡುವಂತೆ ದೊರೆಯಿಂದ ನಿರೂಪ ಕಳಿಸಿದನು. ವಿರೂಪಾಕ್ಷನ ಆಳ್ವಿಕೆಯಿಂದ ಬೇಸತ್ತು ಜಿಗುಪ್ಸೆಗೊಂಡ ತಾತಾಚಾರ್ಯರು ತಿರುಪತಿಯಲ್ಲಿದ್ದುದನ್ನು ತ್ಯಜಿಸಿ ದೂರದ ತಮ್ಮ ಸ್ವಂತ ಸ್ಥಳಕ್ಕೆ ಹೊರಟುಹೋದರು.

ತಿರುಪತಿ ದೇವಾಲಯದ ಪ್ರಧಾನ ಆಡಳಿತ ನಿರ್ವಾಹಕರೂ, ನಿಯಂತ್ರಕರೂ ಆಗಿದ್ದ ತಾತಾಚಾರ್ಯರ ನಿರ್ಗಮನದಿಂದ, ತಿರುಪತಿಯ ಅರ್ಚಕರ ಸ್ವಚ್ಛಂದ ಪ್ರವೃತ್ತಿ ಹೆಚ್ಚಿ ಅವರು ದೇವಾಲಯದ ನೈವೇದ್ಯವನ್ನು ಮಾರಿ ಹಣ ಮಾಡಿಕೊಳ್ಳತೊಡಗಿದರು. [1] ತೀರ್ಥವನ್ನು ಹಣಕ್ಕೆ ಮಾರಿಕೊಂಡರು. ದೇವಾಲಯದ ಒಡವೆ ವಸ್ತುಗಳನ್ನು ತಮ್ಮ ಮಡದಿ ಮಕ್ಕಳಿಗೆ ಹಾಕಿ ಅಲಂಕರಿಸತೊಡಗಿದರು. ದೇವಾಲಯದ ಪಾತ್ರೆಗಳೂ, ಚಿನ್ನ ಬೆಳ್ಳಿ ಒಡವೆಗಳೂ, ಅರ್ಚಕರ ಮನೆಯ ಮದುವೆ ಮುಂಜಿ ಸಮಾರಂಭಗಳಿಗೆ ವಿನಿಯೋಗಿಸಲ್ಪಟ್ಟವು. [2]

ವಿಜಯನಗರದ ಅರಸು ವಿರೂಪಾಕ್ಷನು ಸದಾ ವಿಷಯಲಂಪಟನಾಗಿದ್ದು, ವಿಲಾಸಿಯಾಗಿದ್ದುದರಿಂದ, ಇಡೀ ಸಾಮ್ರಾಜ್ಯದಲ್ಲಿ ಅರಾಜಕತೆಯ ಸೂಚನೆಗಳು ಕಾಣತೊಡಗಿದುದರಿಂದ, ಚಂದ್ರಗಿರಿಯರಸು ಸಾಳುವ ನರಸಿಂಹನು ಪ್ರಜೆಗಳ ಒತ್ತಾಸೆಯಂತೆ ಪ್ರಾಬಲ್ಯಕ್ಕೆ ಬಂದು ಮಾಂತ್ರಿಕನನ್ನೂ, ಕೈಗೊಂಬೆಯಂತಹ ದೊರೆಯನ್ನೂ ಮೂಲೋತ್ಪಾಟನ ಮಾಡಿ ತಾನೇ ಅಧಿಕಾರಕ್ಕೆ ಬಂದನು. ಪರಾಕ್ರಮಿಯೂ, ಧರ್ಮಿಷ್ಟನೂ ಆದ ನರಸಿಂಹನು ಬಹಮನಿ ದೊರೆ ಯೂಸೂಫ್ ಅದಿಲ್ ಶಾಹನನ್ನು ಗೆದ್ದು ವಿಜಯನಗರದ ಕೀರ್ತಿಯನ್ನು ಕಾಪಾಡಿ ತನ್ನ ಬಾಹುಬಲ ಸಾಮರ್ಥ್ಯದ ಮೂಲಕ ಸುಪ್ರಸಿದ್ಧನಾಗಿ, ಹೇಡಿಯೂ, ದುರಾಚಾರಿಯೂ ಆಗಿದ್ದ ಮುಮ್ಮಡಿ ವಿರೂಪಾಕ್ಷ ದೊರೆಗೆ ಹೆಸರಿಗೆ ಮಾತ್ರವೇ ಅಧೀನನಾಗಿದ್ದು, ವಿಜಯನಗರದಲ್ಲಿ ನಡೆದಂತೆಯೇ ಸಕಲ ರಾಜವೈಭವಗಳನ್ನೂ ಚಂದ್ರಗಿರಿಯಲ್ಲಿ ಮೆರೆಸುತ್ತಾ ಸಂಕ್ಷಿಪ್ತ ಸಾರ್ವಭೌಮನಾಗಿಯೇ ಮೆರೆದಿದ್ದನು. ತಿರುಪತಿ ದೇವಸ್ಥಾನದ ಕೆಲ ಅರ್ಚಕರು ವಿಜಯನಗರದ ಅರಸು ವಿರೂಪಾಕ್ಷನನ್ನು ಮರುಳು ಮಾಡಿ ವಿಜಯನಗರ ರಾಜ್ಯ ಸ್ಥಾಪನೆಯಾದಂದಿನಿಂದಲೂ ನಡೆದು ಬಂದಿದ್ದ ವಿರೂಪಾಕ್ಷ ಮೊಹರನ್ನು ಅಳಿಸಿ ಅದರಲ್ಲಿ ರಾಮನಾಮವನ್ನು ಬರೆಸಿದ್ದು ಸಾಳುವ ನರಸಿಂಹನಿಗೆ ಬೇಸರ

---

1 'ಶ್ರೀ ವ್ಯಾಸರಾಜರು' – ಶ್ರೀನಿವಾಸರಾವ್ ಕೊರಟಿ – ಪು : 165

2 ಕರ್ನಾಟಕ ಭಕ್ತಿ ವಿಜಯ : ಬೇಲೂರು ಕೇಶವದಾಸರು – ಪು: 64

ತರಿಸಿತ್ತು.[1] ಶ್ರೀ ಸಾಳುವ ನರಸಿಂಹನು ತಿರುಪತಿ ಶ್ರೀನಿವಾಸನ ಅಂತರಂಗ ಭಕ್ತನಾಗಿದ್ದನು. ಚಂದ್ರಗಿರಿಯು ಪಕ್ಕದಲ್ಲೇ ಇದ್ದ ತಿರುಪತಿ, ತಿರುಮಲೆ ದೇವರಿಗೆ ಬಹುವಾಗಿ ನಡೆದುಕೊಳ್ಳುತ್ತಿದ್ದ ಸಾಳುವ ನರಸಿಂಹನು 1468ರ ಶಾಸನದಂತೆ ಸ್ವಾಮಿಯ ಪುಷ್ಕರಣಿಯ ಮಧ್ಯೆ ವಸಂತ ಮಂಟಪವನ್ನು "ತಿರುಕ್ಕೋನೇರಿಯಿಲ್ ತಮ್ಮುಡ್ಯೆಯ ಧರ್ಮಮಾಹ ಕಟ್ಟುವಿತ್ತ ವಸಂತಮಂಡಪತ್ತಿಲ್" ಕಟ್ಟಿಸಿದನು. ಈ ಸ್ವಾಮಿ ಪುಷ್ಕರಣಿ ಕೊಳದಲ್ಲಿ ಉತ್ಸವ ಮೂರ್ತಿಗಳನ್ನು ಅತ್ಯಂತ ವೈಭವದಿಂದ ಕೂಡಿಸಿ ತೆಪ್ಪೋತ್ಸವವನ್ನು ಮಾಡುವ ಸಂಪ್ರದಾಯವನ್ನು ಸಾಳುವ ನರಸಿಂಹನೇ ವ್ಯವಸ್ಥೆ ಮಾಡಿದನು. ಡೋಲೋತ್ಸವ, ಮಂಟಪದಲ್ಲಿ ಉಯ್ಯಾಲೆಯ ಉತ್ಸವವನ್ನು ಕೂರಿಸಿ ಐದು ದಿನಗಳವರೆಗೆ ಪೂಜೆ ನಡೆಸುವ ವ್ಯವಸ್ಥೆಯನ್ನು ಸಾಳ್ವ ನರಸಿಂಹನೇ ಏರ್ಪಡಿಸಿ ಅದಕ್ಕಾಗಿ 1473ರಲ್ಲಿ ದೊಮ್ಮರಪಟ್ಟಿ ಎಂಬ ಹಳ್ಳಿಯನ್ನು ದೇವದಾನವಾಗಿ ಕೊಟ್ಟನು.

ಅನೇಕ ಬಗೆಯ ಉತ್ಸವಗಳನ್ನು. ಆ ಉತ್ಸವಗಳಿಗಾಗಿ ವಿಧವಿಧ ನೈವೇದ್ಯಗಳನ್ನು ಏರ್ಪಡಿಸಿದ ಸಾಳ್ವ ನರಸಿಂಹನು ಇದಕ್ಕಾಗಿ ಹತ್ತಾರು ಗ್ರಾಮಗಳನ್ನೇ ದೇವಾಲಯಕ್ಕೆ ದಾನ ಮಾಡಿದ ಅನೇಕ ಶಾಸನಗಳಿವೆ. ಸಾಳ್ವ ನರಸಿಂಹನ ಕಾಲದಲ್ಲಿ ಒಂದು ವರ್ಷಕ್ಕೆ ನೂರ ಐವತ್ನೂರು ದಿನಗಳು ಬೆಟ್ಟದ ಮೇಲೆ ಉತ್ಸವದ ವಿಶೇಷ ದಿನಗಳಾಗಿ ಪರಿಗಣಿಸಲ್ಪಟ್ಟವು. ಇವನ ಕಾಲದಲ್ಲಿ ವರ್ಷಕ್ಕೆ ಏಳು ಬ್ರಹ್ಮೋತ್ಸವಗಳು ಜರುಗುತ್ತಿದ್ದು. ಪ್ರತಿಯೊಂದು ಬ್ರಹ್ಮೋತ್ಸವವೂ ಹದಿಮೂರು ದಿನಗಳ ಕಾಲ ವೈಭವ ವಿಜೃಂಭಣೆಗಳಿಂದ ನಡೆಯುತ್ತಿತ್ತು.

ಹೀಗೆ ಇಡೀ ತಿರುಪತಿಯ ಸಮಗ್ರ ಅಭಿವೃದ್ಧಿ ಕಾರ್ಯಗಳಿಗೆ ಕಾರಣಪುರುಷನಾದ ಮೋಹನ ಮುರಾರಿ ಎಂದು ಖ್ಯಾತನಾದ ಸಾಳ್ವ ನರಸಿಂಹನು, ಸ್ವೇಚ್ಛಾಚಾರಿಗಳಾಗಿ. ಸ್ವಾರ್ಥ ಪ್ರಲೋಭನೆಗಳಿಂದ ತಿರುಪತಿಯ ಶ್ರೀನಿವಾಸನ ಸೇವೆಯನ್ನು ನಿರ್ಲಕ್ಷಿಸಿ. ಅಹಂಕಾರ ಮದದಿಂದ ಮೆರೆಯುತ್ತಾ, ದೇವರ ವಾಹನಗಳ ಮೇಲೆ ಮಕ್ಕಳ ಮದುವೆ ಮೆರವಣಿಗೆಗಳನ್ನು ಮಾಡುತ್ತಾ ಮಹಂತರಿಗೆ ಸಲ್ಲುತ್ತಿದ್ದ ಮರ್ಯಾದೆಯನ್ನು ನಿಲ್ಲಿಸಿದ ಅರ್ಚಕ ವೃಂದದವರನ್ನು ವಿಚಾರಣೆಗೆ ಹೇಳಿ ಕಳುಹಿಸಿದನು. ವಿಜಯನಗರದ ಸಾಮ್ರಾಟ ವಿರೂಪಾಕ್ಷನೇ ತಮ್ಮ ಪರವಾಗಿರುವಾಗ ಮಾಂಡಲೀಕನದೇನೆಂಬ ಸೊಕ್ಕಿನಿಂದ ರಾಜಾಜ್ಞೆಯನ್ನು ತಿರಸ್ಕರಿಸಿದ ಅರ್ಚಕವೃಂದದವರು

---

1 "ಶ್ರೀವೈಷ್ಣವೇ ವಿರೂಪಾಕ್ಷೇ ಪ್ರಶಾಸತಿ ಮಹೀಮಿಮಾಂ
ಆಸನ್ ಶ್ರೀವೈಷ್ಣವಾಸ್ಸರ್ವೇ ಯಥಾರಾಜಾ ತಥಾ ಪ್ರಜಾಃ ।
ವಿರೂಪಾಕ್ಷಾಭಿಧಾಂ ಮುದ್ರಾಂ ವಿರೂಪಾಕ್ಷೋ ವಿಹಾಯ ಚ
ರಾಜಾಂಗುಲೀಯೇ ಶ್ರೀರಾಮ ಮುದ್ರಾಂ ದೃಢತರಾಂ ವ್ಯಧಾತ್ ॥

—ಪ್ರಪನ್ನಾಮೃತ

ಉದ್ಧಟವಾಗಿ ವರ್ತಿಸಿದರು. ಕ್ರುದ್ಧನಾದ ದೊರೆ ತನ್ನ ದಳಪತಿಯನ್ನು ಕರೆಸಿ ಅರ್ಚಕರನ್ನೂ, ಅವರ ಕುಟುಂಬದವರನ್ನೂ ಸೆರೆ ಹಿಡಿದು ಚಂದ್ರಗಿರಿಗೆ ತರ ಬೇಕೆಂದೂ, ಪ್ರತಿಭಟಿಸಿದರೆ ತಲೆ ತೆಗೆಯಲೂ ಹಿಂಜರಿಯಬಾರದೆಂದೂ ಆಜ್ಞಾಪಿಸಿ ಕಳುಹಿಸಿದನು.

ದಳಪತಿಯು ತನ್ನ ಸೈನಿಕರೊಂದಿಗೆ ಹೊರಟು. ರಾಜ ಯಾವುದೋ ಕೆಟ್ಟ ಘಳಿಗೆಯಲ್ಲಿ ಇತ್ತ ಆಜ್ಞೆಯನ್ನು ಜಾರಿಗೆ ತರಲು ಪ್ರಯತ್ನಿಸಿದಾಗ ಅರ್ಚಕವೃಂದದ ವರೆಲ್ಲಾ ಆತ್ಮಹತ್ಯೆ ಮತ್ತು ಕತ್ತಿಯ ಮೊನೆಗೆ ಸಿಕ್ಕು ನಿರ್ನಾಮವಾದರು. ಆದರೆ ಪಾಪಭೀರುವಾದ ನರಸಿಂಹ ಭೂಪಾಲನಿಗೆ ಪೂಜಾರಿಗಳನ್ನು ಕೊಂದ ಬ್ರಹ್ಮಹತ್ಯಾ ದೋಷದ ಗಾಢ ಭೀತಿ ಆವರಿಸಿಕೊಂಡು ಅನ್ನ ನೀರಿಲ್ಲದೆ ಕಳಾಹೀನನಾಗತೊಡಗಿ ದನು. ಆಗ ಶ್ರೀಪಾದರಾಜರ ಅಗಮ್ಯ ಮಹಿಮೆಗಳನ್ನರಿತ ರಾಜ ಅವರನ್ನು ಕಂಡು ತನ್ನ ಮನೋಯಾತನೆಯನ್ನೆಲ್ಲ ನಿರೂಪಿಸಿ ತನ್ನನ್ನು ಬ್ರಹ್ಮಹತ್ಯಾ ದೋಷ ದಿಂದ ವಿಮುಕ್ತನನ್ನಾಗಿ ಮಾಡಬೇಕೆಂದು ನಿವೇದಿಸಿಕೊಂಡನು. ತಪೋನಿಧಿಗಳಾದ ಶ್ರೀಪಾದರಾಜರ ಅನುಗ್ರಹ ಬಲದಿಂದ ಕೆಲವೇ ದಿನಗಳಲ್ಲಿ ಸಾಳ್ವ ನರಸಿಂಹನಿಗೆ ಬ್ರಹ್ಮಹತ್ಯಾ ದೋಷ ನಿವಾರಣೆಯಾಯಿತು. ಅದೇ ಸಂದರ್ಭದಲ್ಲಿ ತನ್ನ ದುಡುಕಿ ನಿಂದಾಗಿದ್ದ ಪ್ರಮಾದವನ್ನು ಸರಿಪಡಿಸಿ ತಿರುಪತಿಯ ದೇವಾಲಯದ ಪೂಜೆಯ ಗೊಂದಲಗಳನ್ನು ನಿವಾರಿಸಲು ಸಾಳುವ ನರಸಿಂಹ ಶ್ರೀಪಾದರಾಜರಿಗೆ ಪ್ರಾರ್ಥಿಸಿ ದಾಗ ಶ್ರೀಪಾದರಾಜರು ತಪಸ್ವಿಗಳೂ, ವಿವೇಕಿಗಳೂ, ಸದಾಚಾರಿಗಳೂ, ಯೋಗಿ ಗಳೂ ತಮ್ಮ ಆಪ್ತ ಶಿಷ್ಯ ವ್ಯಾಸರಾಜರೇ ಈ ಕಾರ್ಯಕ್ಕೆ ಸಾರ್ಥಕ ಸಮರ್ಥರೆಂದು ಹೇಳಿ, ವ್ಯಾಸರಾಜರನ್ನು ಆಶೀರ್ವದಿಸುತ್ತಾ ಹೀಗೆ ನುಡಿದರು.

ರಾಜಗುರುಗಳು ಸಾಮ್ರಾಜ್ಯ ಹಾಗೂ ಧರ್ಮರಕ್ಷಣಾ ಕಾರ್ಯದಲ್ಲಿ ನಿರತರು. ದತ್ತಾತ್ರೇಯ, ವಾಮದೇವ, ವಸಿಷ್ಠ ಮುಂತಾದ ಬ್ರಹ್ಮರ್ಷಿಗಳು ಮಹಾ ವೈರಾಗ್ಯ ಶಿಖಾಮಣಿಗಳಾಗಿ ಸರ್ವಸಂಗ ಪರಿತ್ಯಾಗಿಗಳಾಗಿದ್ದರೂ ಧರ್ಮ ಸಂರಕ್ಷಣಾರ್ಥವಾಗಿ ರಾಜಸಭೆಗಳಲ್ಲಿ ದೊರೆಗಳಿಗೆ ಸೂಕ್ತ ಮಾರ್ಗದರ್ಶನ ನೀಡಿ ಮೂಲಭೂತ ಧರ್ಮದ ಉಳಿವಿಗೆ ಹೋರಾಡಿದರು. ಹಾಗೆಯೇ ನೀವೂ ಸಾಳುವ ನರಸಿಂಹ ಭೂಪಾಲನ ರಾಜಗುರುವಾಗಿದ್ದು, ಧರ್ಮ ಸಂರಕ್ಷಣೆ ಸನಾತನ ಸಂಸ್ಕೃತಿಯ ಅಭ್ಯುದಯ ಕಾರ್ಯ ವನ್ನು ಕೈಗೊಳ್ಳಬೇಕು" ಎಂದು ಹರಸಿ ಹಾರೈಸಿ ವ್ಯಾಸರಾಜರನ್ನು ಒಪ್ಪಿಸಿದರು.

---

1 "ಶ್ರೀಮದ್ವೀರ ನೃಸಿಂಹ ರಾಜನೃಪತೇ ರ್ಭೂದೇವಹತ್ಯಾವ್ಯಥಾಂ
ದೂರೀಕೃತ್ಯತದರ್ಚಿತೋಜ್ವಲಮಹಾಸಿಂಹಾಸನೇ ಸುಸ್ಥಿತಃ
ಶ್ರೀಮತ್ಪೂರ್ವಕವಾಟನಾಮಕಪುರೇ ಸರ್ವೇಷ್ಟ ಸಿದ್ಧಿಪ್ರದಃ
ಶ್ರೀ ಶ್ರೀಪಾದ ಯತೀಂದ್ರ ಶೇಖರಮಣಿಃ ಭೂಯಾಚ್ಚನಃ ಶ್ರೇಯಸೇ"

—ವ್ಯಾಸರಾಜರು ರಚಿಸಿರುವ ಶ್ರೀಶ್ರೀಪಾದರಾಜಾಷ್ಟಕ

ಸಾಳ್ವ ನರಸಿಂಹನು ಅತ್ಯಂತ ಸಂಭ್ರಮ ಸಡಗರಗಳಿಂದ ಎಲ್ಲ ಪವಿತ್ರ ನದಿಗಳ ಪವಿತ್ರ ತೀರ್ಥಗಳನ್ನು ವ್ಯಾಸರಾಜ ಗುರು ಸಾರ್ವಭೌಮರ ಸ್ವಾಗತಕ್ಕಾಗಿ ತರಿಸಿ ಅನೇಕ ದಿನಗಳ ಮುಂಚಿತವಾಗಿಯೇ ವಿವಿಧ ಬಗೆಯ ಹವನ ಹೋಮಗಳನ್ನೇರ್ಪಡಿಸಿದನು. ರಾಜ್ಯದ ಸಮಸ್ತ ದೇವಾಲಯಗಳಲ್ಲೂ ವಿಶೇಷ ಪೂಜಾ ವ್ಯವಸ್ಥೆಗಳು. ದೀನ ದಲಿತರಿಗೆ ಪ್ರತಿನಿತ್ಯ ಅನ್ನ ವಸ್ತ್ರ ದಾನಾದಿಗಳು. ಬ್ರಾಹ್ಮಣ ಸುವಾಸಿನಿಯರಿಗೆ ಗೌರವಾದರಗಳು ಅಖಂಡವಾಗಿ ನಡೆಯುತೊಡಗಿದವು. ವ್ಯಾಸರಾಜರನ್ನು ತನ್ನ ರಾಜಧಾನಿ ಚಂದ್ರಗಿರಿಗೆ ನರಸಿಂಹ ಭೂಪಾಲನು ಸ್ವಾಗತಿಸಲು ಎಲ್ಲ ವ್ಯಾಪಕ ಸಿದ್ಧತೆಗಳನ್ನೂ ಮಾಡಿ ಅನಂತರದಲ್ಲಿ ವ್ಯಾಸರಾಜರಿಗೆ ದೊರೆತ ಭವ್ಯ ಸ್ವಾಗತವನ್ನು ಸೋಮನಾಥ ಕವಿ ನಿರೂಪಿಸಿದ್ದಾನೆ.

ಗುರುಗಳ ಅಮೃತಾನುಗ್ರಹ ವಿಶೇಷದಿಂದ ಧನ್ಯನಾದ ಸಾಳುವ ನರಸಿಂಹನು ಒಂದು ನಿಶ್ಚಿತ ದಿನ ಮಂಗಳ ಮುಹೂರ್ತದಲ್ಲಿ ವ್ಯಾಸರಾಜ ಮಹಾಪ್ರಭುಗಳನ್ನು ವಿಜಯನಗರ ಸಾಮ್ರಾಜ್ಯದ ರತ್ನ ಸಿಂಹಾಸನದ ಮೇಲೆ ಮಂಡಿಸಿ. ರತ್ನಾಭಿಷೇಕ ಮಾಡಿಸಿದನು. ಆ ಅಭೂತಪೂರ್ವ ಸಭೆಯಲ್ಲಿ ವಂದಿಮಾಗಧರು ಪರಾಕು ಹೇಳುತ್ತಿರಲು, ಆಸ್ಥಾನಿಕರು ಜಯಕಾರ ಹೇಳುತ್ತಿರಲು, ಬ್ರಾಹ್ಮಣರು ವೇದಘೋಷ ಮಾಡುತ್ತಿರಲು, ವ್ಯಾಸರಾಯರನ್ನು ರಾಜಗುರುಗಳೆಂದು ಘೋಷಿಸಿ, ಸಕಲ ರಾಜ ಮರ್ಯಾದೆಯನ್ನು ಮಾಡಿ ಕಾಣಿಕೆಗಳನ್ನು ಅರ್ಪಿಸಿ. ತಿರುಪತಿಯ ಪೂಜಾ ಕೈಂಕರ್ಯವನ್ನು ಶ್ರೀಗಳವರೇ ಕೈಗೊಳ್ಳಬೇಕೆಂದು ವಿನಮ್ರವಾಗಿ ಪ್ರಾರ್ಥಿಸಿದರು. ಶ್ರೀಪಾದರಾಜರು ಹಾಗೂ ಸಾಳ್ವ ನರಸಿಂಹ ಇಬ್ಬರ ವಿಶ್ವಾಸಪೂರ್ವಕ ಒತ್ತಾಯದಿಂದಾಗಿ ವ್ಯಾಸರಾಯರು ಪ್ರಯಾಣ ಮಾಡಿ ತಿರುಪತಿಗೆ ಬಂದರು. ತಿರುಪತಿಯ ಶ್ರೀನಿವಾಸನ ದರ್ಶನದಿಂದ ಪುಳಕಿತರಾದ ವ್ಯಾಸರಾಜರು–

" ಪ್ರಾತಃಸ್ಮರಾಮಿ ರಮಯಾ ಸಹ ವೆಂಕಟೇಶಂ
ಮಂದಸ್ಮಿತಂ ಮುಖ ಸರೋರುಹ ಕಾಂತಿರಮ್ಯಂ
ಮಾಣಿಕ್ಯಕಾಂತಿ ವಿಲಸನ್ಮುಕುಟೋರ್ಧ್ವಪುಂಡ್ರಂ
ಪದ್ಮಾಕ್ಷಲಕ್ಷ ಮಣಿಕುಂಡಲ ಮಂಡಿತಾಂಗಮ್."

ಎಂದು ಅತ್ಯಂತ ಆನಂದದಿಂದ ಭಕ್ತಿಪರವಶರಾಗಿ ಭಜಿಸಿ ಪೂಜಿಸತೊಡಗಿರು.

ವ್ಯಾಸರಾಯರು ತಿರುಪತಿಯಲ್ಲಿ ಶ್ರೀನಿವಾಸನನ್ನು ನಿಷ್ಠಾಭಕ್ತಿಗಳಿಂದ ಸೇವಿ

---

1 "ಶ್ರೀನಿವಾಸೇಚ್ಛಯಾ ಪ್ರಾಪ್ತಂ ವೈಭವಂ ವೀಕ್ಷ್ಯತನ್ಮಹತ್
ಓ ಮಿತ್ಯುಕ್ತ್ವಾ ಭಕ್ತಿಭರಸ್ತತಂತ್ರ ಸಾರೋಕ್ತ ಮಾರ್ಗತಃ ॥
ಅಪೂಜಯಚ್ಛ್ರೀನಿವಾಸಂ ವ್ಯಾಸರಾಜೋ ದ್ವಿಷಟ್ಸಮಾಃ
ವಿಭವೈರ್ಬಹುಭಿಶ್ಚೈವ ತದಾಭಕ್ತಿ ಪುರಸ್ಸರಂ ॥

ಸ್ವತ್ಹಾ 12 ವರ್ಷಗಳ ಕಾಲ (ಕ್ರಿ. ಶ. ಸುಮಾರು 1486-1498) ಇದ್ದರು. ಈ ಅವಧಿಯಲ್ಲಿ ಅವರು ಪೂಜಾವಿಧಾನದಲ್ಲೂ, ದೇವಾಲಯದ ಆಡಳಿತದಲ್ಲೂ ಅನೇಕ ಸುಧಾರಣೆಗಳನ್ನು ತಂದರು. ಅವರು ತಂತ್ರಸಾರ ಆಗಮೋಕ್ತ ಕ್ರಮದಿಂದ ಶ್ರೀ ವೆಂಕಟೇಶ್ವರ ಸ್ವಾಮಿಯನ್ನು ಪೂಜಿಸುವ ವ್ಯವಸ್ಥೆ ಮಾಡಿದರು. ಮಧ್ವಾಚಾರ್ಯರು ತಂತ್ರ ಸಾರದಲ್ಲಿ "ಪ್ರತಿಮಾಯಾಂತು ಸಾನ್ನಿಧ್ಯಂ. ಅರ್ಚಕಸ್ಯ ತಪೋಬಲಾತ್" ಎಂದು ಹೇಳಿರುವಂತೆ, ವ್ಯಾಸರಾಯರು ತಮ್ಮ ತಪಶ್ಶಕ್ತಿಯಿಂದ ಸ್ವಾಮಿಯನ್ನು ಒಲಿಸಿಕೊಂಡು ಭಗವಾತ್ಸಾನ್ನಿಧ್ಯವನ್ನು ಅಲ್ಲಿ ಜಾಗ್ರತಗೊಳಿಸಿದರು. ಪ್ರತಿ ಗುರುವಾರ ಸ್ವಾಮಿಗೆ ಪೂಲಂಗಿ ಸೇವೆ, ಪ್ರತಿ ಶುಕ್ರವಾರ ಶ್ರೀ ಸ್ವಾಮಿಯ ವಿಗ್ರಹಕ್ಕೆ ಪೂರ್ತಿಯಾಗಿ ಪುನುಗಿನ ಅಭಿಷೇಕದ ವ್ಯವಸ್ಥೆಯನ್ನು ಮಾಡಿದ ವ್ಯಾಸರಾಜರು. ಬೆಟ್ಟದ ಮೇಲೆ ಮಂಟಪವೊಂದನ್ನು, ಗುಡಿಯ ಶ್ರೀ ಭಂಡಾರಕ್ಕೆ ಹದಿನಾಲ್ಕು ಸಾವಿರ ನೆರ್‌ಪಣಗಳನ್ನೂ (ಒಂದು ನೆರ್‌ಪಣಕ್ಕೆ ಮೂರೂವರೆ ತೊಲೆ ಬಂಗಾರ), ಅರವತ್ತು ಸಾವಿರ ತೊಲ ಬಂಗಾರದ ಒಡವೆಗಳನ್ನು ಮಾಡಿಸಿಕೊಟ್ಟರು. ಪ್ರತಿವರ್ಷವೂ ವಿಶೇಷ ದಿನಗಳಲ್ಲಿ ಒಟ್ಟು 354 ಅಪ್ಪ – ಪಡಿಗಳನ್ನು ದೇವರಿಗೆ ಅರ್ಪಿಸುವ ವ್ಯವಸ್ಥೆ ಮಾಡಿದರು. ವರ್ಷದಲ್ಲಿ 222 ದಿನಗಳು ಶ್ರೀನಿವಾಸನ ವಿಶೇಷ ಪೂಜೆ ನಡೆಯುವಂತೆ ವ್ಯವಸ್ಥೆ ಮಾಡಿದರು. ವರ್ಷದಲ್ಲಿ ನೂರೈವತ್ತು ನಾಲ್ಕು ದಿನಗಳು ತಿರುಚಾನೂರಿನ ದೇವಾಲಯದ ಪದ್ಮಾವತೀ ಅಮ್ಮನವರ ವಿಶೇಷ ಪೂಜೆಗೂ ವ್ಯವಸ್ಥೆ ಮಾಡಿದರು.

ವ್ಯಾಸರಾಜರು ಪಟ್ಟಿ ಮಾಡಿರುವ ವಿಶೇಷ ದಿನಗಳಲ್ಲಿ ಎಂಟು ಬ್ರಹ್ಮೋತ್ಸವಗಳು ಒಟ್ಟು 96 ದಿನ. ಏಕಾದಶಿಗಳು. ಯುಗಾದಿ. ದೀಪಾವಳಿ. ಕಾರ್ತೀಕೋತ್ಸವ, ಮಾಸ ಸಂಕ್ರಮಣಗಳು. ಪವಿತ್ರೋತ್ಸವ. ಅಧ್ಯಯನೋತ್ಸವ. ಸಹಸ್ರಕಲಶಾಭಿಷೇಕೋತ್ಸವ, ಡೋಲೋತ್ಸವ ಮುಂತಾದುವುಗಳು ಸೇರಿವೆ.

ತಿರುಪತಿಯ ಗೋವಿಂದರಾಜನಿಗೆ ವ್ಯಾಸರಾಜರು ಪಡೈನಾಡು ಸೀಮೆಯ ಶಿಯಾಲ ಪಾಂಡೂರು ಎಂಬ ಗ್ರಾಮವನ್ನು. ದಿನವೂ ಎಂಟು ತಿರುಪ್ಪೋನಕಗಳನ್ನೂ ನಲವತ್ತು ಅಡಿಕೆ. ಎಂಬತ್ತು ವೀಳಯದೆಲೆ. ಒಂದು ಫಲ ಚಂದನವನ್ನು ಅರ್ಪಿಸುವ ಸಲುವಾಗಿ ದತ್ತಿ ಹಾಕಿಕೊಟ್ಟರು.

ಬೆಟ್ಟದ ಮೇಲೆ ತಿರುಮಲೆ ಗುಡಿಯ ಸ್ಥಾನತ್ತಾರರು ಹಾಕಿಸಿದ ಶಾಸನವೊಂದು ವ್ಯಾಸರಾಜರನ್ನು —

"ಶ್ರೀಮತ್ ಪರಮಹಂಸ ಪರಿವ್ರಾಜಕಾಚಾರ್ಯ. ಪದವಾಕ್ಯ ಪ್ರಮಾಣ. ದುರ್ವಾದಿಗರ್ವ ಸರ್ವಸ್ವಾಪಹಾರ. ವೈಷ್ಣವ ಸಿದ್ಧಾಂತಪ್ರತಿಷ್ಠಾಪನಾಚಾರ್ಯ. ಸಕಲ ವಿದ್ವಜ್ಜನ ಮನಃಪದ್ಮವನಸೌಪಸ್ತಿಕ. ಶ್ರೀಮದ್ ವ್ಯಾಸತೀರ್ಥ ಶ್ರೀಪಾದ ಒಡೆಯರು" ಎಂದು ಅತ್ಯುನ್ನತ ಗೌರವಪೂರ್ವಕವಾಗಿ ಕೊಂಡಾಡುತ್ತದೆ.

ಸಾಳುವ ನರಸಿಂಹನ ಕಾಲದಲ್ಲಿ ಗುಡಿಯ ಅರ್ಚಕನಾಗಿದ್ದ ನಂಬಿ ಶಿರಪ್ಪಯ್ಯಾನ್ ಎಂಬುವನು ದೇವರ ಒಡವೆಗಳನ್ನು ಕದ್ದು, ಕಳವು ಖಚಿತವಾದಾಗ ಸಾಳ್ವ ನರಸಿಂಹನು ಬೆಟ್ಟದ ಮೇಲೂ, ಹಾಗೂ ಕೆಳ ತಿರುಪತಿಯಲ್ಲೂ ನಂಬಿ ಶಿರಪ್ಪಯ್ಯನ ಮನೆಯನ್ನು ಬಿಡಿಸಿ, ಗುಡಿಗೆ ಒಪ್ಪಿಸಿದನು. ಈ ಮನೆಗಳನ್ನು ಕೃಷ್ಣದೇವರಾಯನು ವ್ಯಾಸಗುರುಗಳಿಗೆ ಅರ್ಪಿಸಿದ ರೀತಿಯನ್ನು ಚಕ್ಕುಬಂದಿಯ ಸಹಿತವಾಗಿ ಬೆಟ್ಟದ ಮೇಲಿನ ಶಾಸನವೊಂದು ಸಾರುತ್ತದೆ.

"ಬೆಟ್ಟದ ಮೇಲೆ ಎದುರಿನ ಕೆಳಕ್ಕೆ (ತಿರುಮಲೈ ಮೇಲಿಲ್ ತಿರುಕ್ಕೊನೇರಿಕ್ಕು) ಉತ್ತರದಲ್ಲಿ ನಂಬಿ ಚಕ್ರಾಯುಧಭಟ್ಟರ ಮತ್ತು ಚಕ್ರವರ್ತಿ ಅಣ್ಣೈಯಂಗಾರ್ಯರ ಮನೆಗಳ ನಡುವೆ ಇದ್ದ ನಂಬಿಶಿರಪ್ಪಯ್ಯಾನ್ ಅವನ ಮನೆಯನ್ನು ಕೃಷ್ಣದೇವರಾಯ ಭೂಪಾಲನು ವ್ಯಾಸತೀರ್ಥರಿಗೆ ಧಾರಾಪೂರ್ವಕ ಕೊಟ್ಟು ಅಲ್ಲಿ ಅವರು ಮಠವನ್ನು ಕಟ್ಟಿಕೊಳ್ಳಬಹುದೆಂದು ರಾಯಸವನ್ನು ಕೊಟ್ಟುದಲ್ಲದೆ, ಮಠದ ಧರ್ಮಕ್ಕೆಂದು ಕೃಷ್ಣದೇವರಾಯನ ಹೆಸರಿನಲ್ಲಿ ದೇವರಿಗೆ ಸಲ್ಲುವ ನೈವೇದ್ಯದ ಪ್ರಸಾದದ ಒಂದು ಪಾಲನ್ನು ಇವರಿಗೆ ಸಲ್ಲಿಸಬೇಕೆಂದು (1524ರ ಜನವರಿ 12ರಂದು) ಹೊರಡಿಸಿದ ಶಾಸನ. ಅದೇ ರೀತಿ ಕೆಳ ತಿರುಪತಿಯಲ್ಲೂ ಗೋವಿಂದರಾಜನ ಗುಡಿಗೆ ಉತ್ತರ ಮೂಡಬೀದಿಯಲ್ಲಿ ಶೊಟ್ಟೈ ಭಟ್ಟರ್-ಹಸ್ತಿಗಿರಿನಾಥರ್ ಹಾಗೂ ಮಲ್ಲೈನಿನ್ರಾನ್ ಭಟ್ಟರ್– ಅಣ್ಣನ್ ಇವರ ಮನೆಗಳ ನಡುವೆ ಇದ್ದ ನಂಬಿ ಶಿರಪ್ಪಯ್ಯನ ಮನೆಯನ್ನು ವ್ಯಾಸತೀರ್ಥರ ಮಠಕ್ಕೆ ದಾನವಾಗಿ ನೀಡುವ ವಿವರವನ್ನು ಸ್ಪಷ್ಟ ಮಾಡುತ್ತಿದೆ. (ಶಕಾಬ್ದಂ 1445ಲ್ ಮೇಲೆ ಶಲ್ಲಾವಿನ್ರ ಸ್ವಭಾನುಸಂವತ್ಸರತ್ತು ಮಕರ ನಾಯುಟ್ರು ಪಕ್ಷತ್ತು ಸಪ್ತಮಿಯುಂ ಭೌಮವಾರ ಮುಂಪೆಟ್ರು ಅಶ್ವಿನೀ ನಕ್ಷತ್ರ ತಿಕ್ಕುಳ್ (1524 ಜನವರಿ 12)– ತಮಿಳು ಭಾಷೆ ಶಾಸನ).[1]

ಶ್ರೀನಿವಾಸನ ಸನ್ನಿಧಿಯಲ್ಲಿ ತಾವು ಪೂಜೆ ಮಾಡುವಾಗ ಅನೇಕ ಶಿಷ್ಯರ ನೆರವನ್ನು ಪಡೆದಿದ್ದ ವ್ಯಾಸರಾಜರು ದೇವಾಲಯದ ಗರ್ಭಗುಡಿಯ ಆನಂದ ನಿಲಯ ಶಿಖರಕ್ಕೆ ಬಂಗಾರದ ತಗಡನ್ನು ಹೊದಿಸಿ, ವಿಮಾನದ ಉತ್ತರ ದಿಕ್ಕಿನಲ್ಲಿ ವಿಮಾನ ವೆಂಕಟೇಶ್ವರನ ಮಂಗಳ ಮೂರ್ತಿಯು ಕಂಗೊಳಿಸುವಂತೆ ಮಾಡಿದರು. ವ್ಯಾಸರಾಜರ ಆಪ್ತ ಶಿಷ್ಯರಾಗಿದ್ದ ಬೆಟ್ಟಾಚಾರ್ಯರೆಂಬ ದಿಗ್ದಂತಿ ಪಂಡಿತರೂ, ಸದ್ಬ್ರಾಹ್ಮಣರೂ ಶ್ರೀನಿವಾಸನ ಸೇವೆಯಲ್ಲಿ ವ್ಯಾಸರಾಜರೊಡನಿದ್ದು, ಅವರ ಪೂಜಾ ವೈಭವ

---

1 1889ರ ಮದ್ರಾಸ್ ಎಪಿಗ್ರಾಫಿಕಾ ಸಂಗ್ರಹದ 74ನೇ ಸಂಖ್ಯೆ ಶಾಸನ ಮಠ ಬ. ಎದರು ಬಂಡೆ ಮೇಲೆ

ವನ್ನು ತಮ್ಮೊಂದು ಕೃತಿಯಲ್ಲಿ ವರ್ಣಿಸಿದ್ದಾರೆ. [2]

ಇಂದಿಗೂ ತಿರುಪತಿ ದೇವಾಲಯದಲ್ಲಿನ ಎರಡನೆಯ ಪ್ರಾಕಾರದಲ್ಲಿ ವ್ಯಾಸ ರಾಜರು ತಮ್ಮ ಸಂಸ್ಥಾನದ ಪ್ರತಿಮೆಗಳನ್ನು ಇಟ್ಟು ಪೂಜಿಸುತ್ತಿದ್ದ, ಶಿಷ್ಯರಿಗೆ ಪಾಠ ಹೇಳುತ್ತಿದ್ದ ಸ್ಥಳವನ್ನು ನಿರ್ದಿಷ್ಟವಾಗಿ ತೋರಿಸುತ್ತಾರೆ. ಅಲ್ಲಿ ಶ್ರೀ ವ್ಯಾಸರಾಜರ ಪ್ರತೀಕವೊಂದು ಹಾಸುಗಲ್ಲಿನಲ್ಲಿ ಕೆತ್ತಲ್ಪಟ್ಟಿದೆ. ಸಮಸ್ತ ವೈಷ್ಣವರೂ ತಿರುಪತಿಗೆ ಹೋದಾಗ ಈ ಪ್ರತೀಕಕ್ಕೆ ನಮಸ್ಕಾರ ಮಾಡುವ ಪದ್ಧತಿ ಇದೆ.

ಅಪರೋಕ್ಷ ಜ್ಞಾನಿಗಳಾದ ವ್ಯಾಸರಾಜರು ವಿಜಯನಗರ ಸಾಮ್ರಾಜ್ಯದ ರಾಜ ಗುರುವಾಗಿ ಇದೇ ಹಿಂದೂ ಸಾಮ್ರಾಜ್ಯದ ಧಾರ್ಮಿಕ ಸಂರಕ್ಷಣೆ ಮಾಡಬೇಕಾಗಿರುವ ತಮ್ಮ ಮಹತ್ಕಾರ್ಯ. ಕರ್ತವ್ಯಗಳನ್ನರಿತು, ನಿರ್ನಾಮವಾಗಿದ್ದ ಅರ್ಚಕ ಸಂತತಿಯ ಬಾಲಕನು ಉಪನೀತನಾಗುತ್ತಲೇ ಆತನಿಗೆ ಆಗಮಶಾಸ್ತ್ರ ವ್ಯಾಸಂಗ ಮಾಡಿಸಿ ವೆಂಕಟೇಶ್ವರನ ಪೂಜಾ ವ್ಯವಸ್ಥೆಯನ್ನು ಅವನಿಗೇ ವಹಿಸಿಕೊಟ್ಟರು.

ಅದುವರೆಗೆ ಶ್ರೀನಿವಾಸನ ದಿವ್ಯ ಸಾನ್ನಿಧ್ಯದಲ್ಲಿ ಆನಂದ ಸಾಗರದಲ್ಲಿ ಮಿಂದು ಧನ್ಯರಾಗಿ ಮೈಮರೆತಿದ್ದ ವ್ಯಾಸರಾಜರು. ತಾವು ತಿರುಮಲೆಯನ್ನು ಬಿಟ್ಟು ಹೊರಡುವಾಗ–

ನಿನ್ನ ನೋಡಿ ಧನ್ಯನಾದೆನೋ ಹೇ ಶ್ರೀನಿವಾಸ
ನಿನ್ನ ನೋಡಿ ಧನ್ಯನಾದೆ ನೆನ್ನಮನದಿ ನಿಂತು ಸುಪ್ರ
ಸನ್ನ ದಯಮಾಡಿ ನೀನು ಮುನ್ನಿನಂತೆ ಸಲಹಬೇಕು ॥

ಲಕ್ಷ್ಮೀರಮಣ ಪಕ್ಷಿವಾಹನ ರಕ್ಷನಿನ್ನದಲ್ಲೇ ಪಾಂಡು
ಪಕ್ಷ ದೈತರ ಶಿಕ್ಷ ರಕ್ಷಿಸೆನ್ನ ಕಮಲಾಕ್ಷ ।
ದೇಶ ದೇಶವನ್ನು ತಿರುಗಿ ಆಶೆಬದ್ಧನಾದೆ ಸ್ವಾಮಿ

ಪಾಶನನ್ನದಲ್ಲ ಜಗದೀಶ ಕಾಯೋ ವಾಸುದೇವ
ಕಂತುಜನಕ ಕೇಳೋ ಎನ್ನ ಅಂತರದ ಸೇವೆಯನ್ನು
ಅಂತರವಿಲ್ಲದೆ ಸಲಹಬೇಕು ಹೊಂತಕಾರಿ ಮುದ್ದುಕೃಷ್ಣ

ಎಂದು, ಇನ್ನು ಮುಂದೆ ಅಂತರದಿಂದ ಎಂದರೆ ದೂರದಿಂದ ಮಾಡುವ ಸೇವೆ ಯನ್ನು ಭಗವಂತ ಅಂತರವಿಲ್ಲದೆ, ದೂರವಿಡದೆ ಮುಂಚಿನಂತೆಯೇ ಸಲಹಬೇಕು

---

2 ವೆಂಕಟೇ ದ್ವಾದಶಾಬ್ದಾಂಸ್ತು ವ್ಯಾಸರಾಜ ಯತೀಶ್ವರಃ
ಅಭ್ಯಾರ್ಚಯಚ್ಛ್ರೀನಿವಾಸಂ ತಂತ್ರಸಾರೋಕ್ತವರ್ತ್ಮನಾ ।
ಬೆಟ್ಟಾಚಾರ್ಯಸ್ತಸ್ಯ ಶಿಷ್ಯೋಽನ್ವವಸದ್ಗುರುಭಿಃ ಸಹ
ತಸ್ಯಾನ್ವಯೇ ವ್ಯಜಾಯಂತ ಪಂಡಿತಾ ಬಹುವಿಶ್ರುತಾಃ ॥

ಎಂದು ಆರ್ತರಾಗಿ ಪ್ರಾರ್ಥಿಸಿದರು.

ಶಾಸನಗಳ ಹಿನ್ನೆಲೆಯಲ್ಲಿ ಕೃಷ್ಣದೇವರಾಯನಿಗೆ ಅನೇಕ ಜನ ಧರ್ಮಗುರು ಗಳಿದ್ದರೂ, ಪ್ರಪ್ರಥಮ ಪುರಸ್ಕಾರ, ಗೌರವಕ್ಕೆ ಭಾಜನರಾಗಿದ್ದವರು ವ್ಯಾಸರಾಜರು. ಅವರು ತಿರುಮಲೆ ದೇವಸ್ಥಾನಕ್ಕೆ ಸಲ್ಲಿಸಿರುವ ಸೇವೆಯನ್ನು ಹೃತ್ಪೂರ್ವಕ ಪ್ರಶಂಸಿಸುವ ಶಾಸನ, ಸಾಮ್ರಾಜ್ಯದಲ್ಲಿ, ತಿರುಪತಿಯಲ್ಲಿ, ಅನೇಕ ಜನ ಧರ್ಮಗುರು ಗಳಿದ್ದರೂ, ಪ್ರಥಮಾದರ ಗೌರವಕ್ಕೆ ಪಾತ್ರರಾಗಿದ್ದವರು ಶ್ರೀ ವ್ಯಾಸರಾಜರೆಂಬು ದನ್ನು ಸ್ಪಷ್ಟವಾಗಿ ನಿರೂಪಿಸುತ್ತದೆ.

ಕೃಷ್ಣದೇವರಾಯನು ಉದಯಗಿರಿಯಿಂದ ತಂದ ಬಾಲಕೃಷ್ಣನ ವಿಗ್ರಹವನ್ನು ವಿಜಯನಗರದಲ್ಲಿ ವೈಭವದಿಂದ ಪ್ರತಿಷ್ಠಾಪನೆ ಮಾಡಿ (ವ್ಯಾಸರಾಜರ ಸೂಚನೆ ಯಂತೆ) ಮುಳುಬಾಗಿಲಿನ ತಿಮ್ಮಣ್ಣಾಚಾರ್ಯ, ರಾಮಣ್ಣಾಚಾರ್ಯ ಎಂಬುವರನ್ನು ಅದರ ಅರ್ಚಕರಾಗಿರಲು ನೇಮಿಸಿದನು. ಇದೇ ಸ್ಥಳದ ಇದೇ ದಿನದ ಇನ್ನೊಂದು ಶಾಸನ—

" ಈ ದೇವಾಲಯದಲ್ಲಿ ಪವಮಾನಾಭಿಷೇಕವನ್ನು ನಿರ್ವಹಿಸಲು, ರಾಜನು ಹನ್ನೆರಡು ಜನ ಬ್ರಾಹ್ಮಣರನ್ನು ನೇಮಿಸಿದನು " ಎಂದು ತಿಳಿಸುತ್ತಿದೆ.

ಇದೇ ಸಂಗತಿಯನ್ನಾಧರಿಸಿ ವ್ಯಾಸರಾಜರು ತಮ್ಮ ಖ್ಯಾತ ಕೃತಿಯೊಂದರಲ್ಲಿ

" ಧರೆಗಧಿಕನೆಂದೆನಿಪ ವಿದ್ಯಾನಗರ ಒಳೆತೆಂದು ಉದಯ
ಗಿರಿಯಿಂದ ಬಂದ ಮುದ್ದು ಬಾಲಕೃಷ್ಣನಮ್ಮ " ಎಂದಿದ್ದಾರೆ.

ವ್ಯಾಸರಾಜರು ವಿಜಯನಗರದ ಸಾಮ್ರಾಜ್ಯ ಸಂರಕ್ಷಕ ಧರ್ಮ ಗುರುಗಳಾಗಿದ್ದು ತಮ್ಮ ಸಾಧನೆಯ ಅತ್ಯುನ್ನತ ಶೃಂಗವಾಗಿ ತಿರುಪತಿಯಲ್ಲಿ ನಡೆಸಿರುವ ಕೈಂಕರ್ಯ ಸಾಮ್ರಾಜ್ಯದ ಅನೇಕ ರಾಜರುಗಳಿಗೆ ಆದರ್ಶಪ್ರಾಯವಾಗಿತ್ತು. ತಾವು ತಿರುಪತಿ ಶ್ರೀನಿವಾಸನ ಕೈಂಕರ್ಯ ನಡೆಸುತ್ತಿದ್ದ ಕಾಲದಲ್ಲಿ, ಪ್ರತಿದಿನ ಪಾಠ ಪ್ರವಚನ, ಪೂಜೆ, ವಿದ್ವತ್ ಸಭೆಗಳನ್ನು ನಡೆಸುತ್ತಿದ್ದ ಗುರುಗಳು ತಮ್ಮಿಂದ ಸಮಗ್ರ ಸಾಮ್ರಾಜ್ಯ ಸಂರಕ್ಷಣೆ ಹಾಗೂ ಹಿಂದೂ ಧರ್ಮದ ಪುನರುತ್ಥಾನದ ಮಹಾ ಕಾರ್ಯಗಳು ನಡೆಯ ಬೇಕೆಂಬುದನ್ನು ಅರಿತು, ವಿಜಯನಗರದತ್ತ ಹೊರಡಲು ನಿರ್ಧರಿಸಿದಾಗ, ತಿರುಮ ಮಲೆಯ ಅರ್ಚಕರಾಗಿದ್ದ ತಾತಾಚಾರ್ಯರ ವಂಶೀಕ ಮಗುವೊಬ್ಬ ಉಳಿದುದನ್ನು ತಿಳಿದು, ಅವನನ್ನು ಕರೆಸಿ, ಆ ಬಾಲಕನಿಗೆ ಸಮಸ್ತ ಉಪನಯನಾದಿ ಸಂಸ್ಕಾರ ಗಳನ್ನು ಮಾಡಿ, ಆಗಮೋಕ್ತ ಪೂಜಾಪದ್ಧತಿಯನ್ನೂ ತಿಳಿಸಿ ಶ್ರೀನಿವಾಸನ ಕೈಂಕರ್ಯ ವನ್ನು ಅವನಿಗೊಪ್ಪಿಸಿದರು. ತಾವು ತಿರುಪತಿ ಬಿಟ್ಟು ಹೊರಡುವ ದಿನ ದ್ವಾದಶಿ ಯ ಶುಕ್ರವಾರ. ಅತ್ಯಂತ ದೀನಮಾನರಾಗಿ ದೇವರ ದೇವನನ್ನು ಭಕ್ತಿಪೂರ್ವಕ ಪ್ರಾರ್ಥಿಸಿ, ಸಾಷ್ಟಾಂಗ ನಮಸ್ಕರಿಸಿದಾಗ ಕಣ್ಣುಗಳಿಂದ ತಾನೇ ತಾನಾಗಿ ಅಶ್ರುಧಾರೆ, ಭಕ್ತಿಯ ಉದ್ರೇಕದಿಂದ ಪುಳಕಿತರಾದ ವ್ಯಾಸರಾಜರು ಸಾಷ್ಟಾಂಗ ಮಾಡಿ ಏಳುವಷ್ಟ

ರಲ್ಲಿ ಅವರ ಮೈಮೇಲೆ ವೆಂಕಟೇಶ್ವರಸ್ವಾಮಿ ಹೊದ್ದಿದ್ದ ಜರತಾರೀ ಪೀತಾಂಬರವು ಬಿದ್ದು ದೇವರೇ ಹೊದಿಸಿದಂತೆ ಭಾಸವಾಯಿತು. ಸ್ವಾಮಿ ಶ್ರೀಗಳವರ ಸೇವೆಗೆ ಸಂಪೂರ್ಣ ಸಂತೃಪ್ತನಾಗಿ ಶೇಷವಸ್ತ್ರದಿಂದ ಅವರನ್ನು ಅನುಗ್ರಹಿಸಿದನು.

ಇಂತಹ ಅಪೂರ್ವ ಅನುಗ್ರಹ ವಿಶೇಷದ ಸ್ಮರಣಾರ್ಥವಾಗಿ ಇಂದಿಗೂ ಪ್ರತಿ ವರ್ಷವೂ ಆ ದ್ವಾದಶಿಯ ದಿನ ವ್ಯಾಸರಾಯ ಮಠದ ಪೀಠಾಧಿಪತಿಗಳು ಜರತಾರೀ ಪೀತಾಂಬರವನ್ನು ಹೊದೆಯುವ ಆ ಮೂಲಕ ವ್ಯಾಸರಾಜರು ತಿರುಪತಿಯಲ್ಲಿ ವೆಂಕಟೇಶನಿಗೆ ನಡೆಸಿದ ಕೈಕಂರ್ಯವನ್ನು ಸ್ಮರಿಸಿಕೊಳ್ಳುವ ಪದ್ಧತಿ ಉಳಿದುಬಂದಿದೆ.

000

---

## ವ್ಯಾಸತೀರ್ಥರ ಮೂರು ಶ್ಲೋಕಗಳು

ಶ್ರೀ ವ್ಯಾಸತೀರ್ಥರು ಹನ್ನೆರಡು ವರ್ಷಕಾಲ ಶ್ರೀನಿವಾಸನನ್ನು ಪೂಜಿಸಿದ್ದರೂ ಶ್ರೀನಿವಾಸನನ್ನು ಕುರಿತ ಒಂದು ಕನ್ನಡ ಪದ್ಯವೂ ಅವರಿಂದ ಕೃತವಾಗಿ ಉಪಲಬ್ಧವಾಗಿಲ್ಲ. ಆದರೆ ಕೆಳಗಿನ ಶ್ಲೋಕತ್ರಯ ಶ್ರೀವ್ಯಾಸತೀರ್ಥಕೃತವೆಂದು ಉಲ್ಲಿಖಿತವಾಗಿದೆ

ಪ್ರಾತಃ ಸ್ಮರಾಮಿ ರಮಯಾ ಸಹ ವೇಂಕಟೇಶಂ
ಮಂದಸ್ಮಿತಂ ಮುಖ ಸರೋರುಹ ಕಾಂತಿರಮ್ಯಂ ;
ಮಾಣಿಕ್ಯ ಕಾಂತಿವಿಲಸನ್ಮುಕುಟೋರ್ಧ್ವಪುಂಡ್ರಂ
ಪದ್ಮಾಕ್ಷಲಕ್ಷಮಣಿ ಕುಂಡಲ ಮಂಡಿತಾಂಗಂ ॥೧॥

ಪ್ರಾತರ್ಭಜಾಮಿ ಕರರಮ್ಯ ಸುಶಂಖಚಕ್ರಂ
ಭಕ್ತಾಭಯಪ್ರದ ಕಟಿಸ್ಥಲದತ್ತ ಪಾಣಿಂ ।
ಶ್ರೀವತ್ಸಕೌಸ್ತುಭಲಸನ್ಮಣಿಕಾಂಚನಾಢ್ಯಂ
ಪೀತಾಂಬರಂ ಮದನಕೋಟಿ ಸುಮೋಹನಾಂಗಂ ॥೨॥

ಪ್ರಾತರ್ನಮಾಮಿ ಪರಮಾತ್ಮಪದಾರವಿಂದಂ
ಆನಂದಸಾಂದ್ರನಿಲಯಂ ಮಣಿನೂಪುರಾಢ್ಯಂ ।
ಏತತ್ಸಮಸ್ತ ಜಗತಾಮಿತಿ ದರ್ಶಯಂತಂ
ವೈಕುಂಠಮತ್ರ ಭಜತಾಂ ಕರಪಲ್ಲವೇನ ॥೩॥

ವ್ಯಾಸರಾಜಯತಿಪ್ರೋಕ್ತಂ ಶ್ಲೋಕತ್ರಯಮಿದಂ ಶುಭಂ ॥
ಪ್ರಾತಃಕಾಲೇ ಪಠೇದ್ಯಸ್ತು ಪಾಪೇಭ್ಯೋ ಮುಚ್ಯತೇ ನರಃ ॥

# ವ್ಯಾಸತೀರ್ಥ ವಿದ್ಯಾಪೀಠ

—ವಿಚಾರಪ್ರಿಯ

ಕೃಷ್ಣದೇವರಾಯನು ಹಂಪೆಯ ಚಕ್ರತೀರ್ಥದ ಸಮೀಪದಲ್ಲಿ ವ್ಯಾಸರಾಯರ ಪಾಠ ಪ್ರವಚನಗಳಿಗಾಗಿ ಒಂದು ಪಾಠಶಾಲೆಯನ್ನು ಕಟ್ಟಿಸಿದನು. ವ್ಯಾಸತೀರ್ಥರು ವಿಶ್ವಪಾವನ ಮಠವೆಂದು ಅದಕ್ಕೆ ನಾಮಕರಣ ಮಾಡಿದರು. ಇದೇ ಮುಂದೆ ದೊಡ್ಡ ವಿಶ್ವವಿದ್ಯಾನಿಲಯವಾಯಿತು. ಹದಿನೆಂಟನೇ ಶತಮಾನದ ಕವಿ ರಾಘವೇಂದ್ರಪ್ಪನು ತನ್ನ 'ಸಾರಸ್ವತ ಪರಿಣಯ' ಕಾವ್ಯದಲ್ಲಿ ಈ ವಿಶ್ವವಿದ್ಯಾನಿಲಯದ ಕುರಿತು ಹೀಗೆ ಹೇಳಿದ್ದಾನೆ–

ಅರಸನಿಗೆ ಗುರುವೆನಿಪ ಆಪ್ತ ಪ್ರಧಾನನೊಬ್ಬನು ವೃದ್ಧನಿರುತಿಹನಾತ ಸನ್ಯಾಸಿ । ಇವನ ಅಪ್ಪಣೆಯಂತೆ ರಾಜನು ಅನುದಿನವು ನಡೆಯುವನು ಚಕ್ರಾಧಿಪತ್ಯದ ಪ್ರೌಢ ಶಾಲೆಯಿಲ್ಲಿಹುದು ॥

ಇದರೊಳಗೆ ಸಂಸ್ಕೃತದ ವಿದ್ಯಾಭ್ಯಾಸ ನಡೆಯುವುದು ತರ್ಕವ್ಯಾಕರಣ ಸಾಹಿತ್ಯ ವೇದಾಂತಗಳು ಮುಖ್ಯ । ಉಳಿದ ಜ್ಯೋತಿಷ ವೈದ್ಯ ಅಧ್ಯಯನ ಯಾಜ್ಞಿಕ ಎಂಬಿವು ಆಗಮ ಧರ್ಮಶಾಸ್ತ್ರಗಳು ಸಹಿತಾಗಿ ॥

ನನ್ನೀಜನೆಂಬ ಪೋರ್ಚುಗೀಸ ವ್ಯಾಪಾರಿಯು ಒಮ್ಮೆ ವಿದ್ಯಾಪೀಠದ ಘಟಿಕೋತ್ಸವದ ಮೆರವಣಿಗೆಯನ್ನು ವರ್ಣಿಸುತ್ತಾ– 'ಒಂದು ಮೈಲಿ ಉದ್ದದ ಮೆರವಣಿಗೆಯ ಮುಂಬಾಗದಲ್ಲಿ ಸ್ವರ್ಣಕ್ಕೆ ರತ್ನದ ಕೆತ್ತನೆಯನ್ನು ಮಾಡಲ್ಪಟ್ಟ ಪಲ್ಲಕ್ಕಿಯಲ್ಲಿ ಒಬ್ಬ ಯತಿಗಳು ಹೋಗುತ್ತಿರುವುದಾಗಿ ದಾರಿಹೋಕರಿಂದ ತಿಳಿದೆ. ಅವರ ಹಿಂದೆ ವಿಶ್ವವಿದ್ಯಾನಿಲಯದ ವಿದ್ಯಾರ್ಥಿಗಳಿದ್ದರು.' ಎನ್ನುತ್ತಾನೆ.

ಪತ್ರ ಬರೆದು ಅವರ ದರ್ಶನಕ್ಕಾಗಿ ಹೋದ ಅವನಿಗೆ ಆಶ್ಚರ್ಯವೆನಿಸಿತು. ಆ ವ್ಯಕ್ತಿಯು ಸಾಮಾನ್ಯ ಎತ್ತರದವರಾಗಿದ್ದು ತೆಳು ದೇಹದವರಾಗಿದ್ದರು. ಮುಖ

ವಲ್ಲಿ ತೇಜಸ್ಸು ತುಂಬಿತ್ತು. ಒಂದು ತುಂಡು ವಸ್ತ್ರವನ್ನುಟ್ಟು ಮತ್ತೊಂದನ್ನು ತಲೆ ತುಂಬ ಹೊದ್ದಿದ್ದರು .

ಸೋಮನಾಥ ಕವಿ ವ್ಯಾಸತೀರ್ಥರ ವಿಶ್ವಪಾವನ ಮಠಕ್ಕೆ ದರ್ಶನಕ್ಕಾಗಿ ಹೋದಾಗ ಅಲ್ಲಿನ ದೃಶ್ಯವನ್ನು ಹೀಗೆ ವರ್ಣಿಸುತ್ತಾನೆ– ಮಣಿ ಮಂಟಪದ ಮೇಲೆ ರತ್ನ ಕಂಬಳಿಯ ಹಾಸಿನಲ್ಲಿ ಕುಳಿತಿದ್ದ ವ್ಯಾಸಮುನಿಯ ಸುತ್ತಲೂ ಅವರೇ ಮಾಡಿದ ಗ್ರಂಥಗಳನ್ನು ಅನೇಕ ವಿದ್ವಾಂಸರು ಶಿಷ್ಯರಿಗೆ ಪಾಠ ಹೇಳುತ್ತಿದ್ದರು. (ಮಹಾಸ್ಥಾನ ಮಂಟಪ ಮಣಿವೇದಿ ತಲೇ ನಿಷೇದಿವಾನ್ ಸ್ವಕರ್ತೃಕಾಣಿ ಶಾಸ್ತ್ರ ಪ್ರಮೇಯ ಜಾಲಾನಿ ಸುಮಂತಾತ್ ಉಪನ್ಯಸದ್ಭಿಃ ಶಿಷ್ಯವದ್ಭಿಃ) ಮತ್ತೊಂದೆಡೆ ಇವರು ವೈಯಾಕರಣ. ತಾರ್ಕಿಕ, ವೇದಾಂತ ಮತ್ತು ಜ್ಯೋತಿಷ ವಿದ್ವಾಂಸರಿಂದ ಸುತ್ತುವರಿದಿದ್ದರು ಎನ್ನುತ್ತಾನೆ. ಸ್ವತಃ ಕವಿ ಅನೇಕ ದಿನಗಳ ಕಾಲ ಆ ಮಠದಲ್ಲಿದ್ದ. ಅವನ ವರ್ಣನೆಯಲ್ಲಿ ಅದು ವಿಶ್ವವಿದ್ಯಾನಿಲಯವಾಗಿತ್ತೆಂಬ ಅಂಶ ಎದ್ದು ಕಾಣುವುದಿಲ್ಲ.

---

## ವಿದ್ಯಾರ್ಜನೆ

ಯತಿರಾಜನು (ಸೋಮನಾಥಕವಿ ಹೆಸರಿಸಿದ ವ್ಯಾಸತೀರ್ಥರ ಪೂರ್ವಾಶ್ರಮದ ಹೆಸರು ) ವಿದ್ಯಾಪಾರಂಗತನಾಗಿಯೇ ಬ್ರಹ್ಮಣ್ಯ ತೀರ್ಥರಲ್ಲಿಗೆ ಬಂದಿದ್ದ. ಬ್ರಹ್ಮಣ್ಯತೀರ್ಥರೂ ಹೆಚ್ಚಿನ ವಿದ್ಯಾಭ್ಯಾಸ ಮಾಡಿಸಿದಂತಿಲ್ಲ. ಶ್ರೀಪಾದರಾಜರಲ್ಲಿ ಉನ್ನತ ವ್ಯಾಸಂಗವನ್ನು ವ್ಯಾಸತೀರ್ಥರು ನಡೆಸಿದ್ದರಾದರೂ ಅವರಲ್ಲಿ ಹೋಗುವ ಮೊದಲೇ ಕಂಚಿಯ ಪಂಡಿತರನ್ನು ವಾದದಲ್ಲಿ ಗೆದ್ದಿದ್ದರು. ದೇವಗುರು ಬೃಹಸ್ಪತ್ಯಾಚಾರ್ಯರೇನೋ ಎಂದು ಬೆರಗುಗೊಂಡಿದ್ದರು ಅಲ್ಲಿನ ಪಂಡಿತರು. ಅವರ ಪ್ರತಿಭೆಗೆ ಅಸೂಯೆಗೊಂಡ ಬ್ರಾಹ್ಮಣನೊಬ್ಬನ ವಿಷಪ್ರಯೋಗಕ್ಕೆ ಒಳಗಾಗಿದ್ದರು. ಆಮೇಲೆ ಶ್ರೀಪಾದರಾಜರಲ್ಲಿ ಅಧ್ಯಯನ, (ತಸ್ಮಾತ್ ತ್ರಯೀ ಶಿಖರ ತತ್ವರಹಸ್ಯಂ ಅಸಾತೀಸ್ತ್) ಇದು ವ್ಯಾಸಯೋಗಿ ಚರಿತೆಯ ನಿರೂಪಣೆ.

ತಿರುಪತಿಯಿಂದ ಶ್ರೀಪಾದರಾಜರಲ್ಲಿ ಬಂದು ಹನ್ನೆರಡು ವರ್ಷಗಳ ಪರ್ಯಂತ ವೇದಾಂತಾಧ್ಯಯನ ನಡೆಸಿದರು.(ಅಧೀತ್ಯ ತತ್ರ ದಿಷಡಬ್ದ ಕಾಲಂ) ಹೀಗೆ ವೇದಾಂತಗಳ ಅಧ್ಯಯನ ನಡೆದಿದ್ದೆ ಶ್ರೀಪಾದರಾಯರಿಂದ. ಇದು ವ್ಯಾಸವಿಜಯದ ನಿರೂಪಣೆ.

' ಸಿರಿನಾರಾಯಣ ಯೋಗಿಯಾದ ಶ್ರೀಪಾದರಾಯರಲ್ಲಿ ವರವಿದ್ಯಾಭ್ಯಾಸವ ಮಾಡಿ ನೀನು ' ಎಂದಿದ್ದಾರೆ ಪುರಂದರದಾಸರು.

# ಹರಿದಾಸ ಗುರು ವ್ಯಾಸರಾಯರು

ಶ್ರೀಮತಿ ಕಾಕೋಳು ಸರೋಜಾರಾವ್

ಬೃಹದಾರಣ್ಯಕ ಉಪನಿಷತ್ತಿನಲ್ಲಿ ವೇದಾಂತ ಗ್ರಂಥಗಳಿಗೆ ವ್ಯಾಖ್ಯಾನ ಮಾಡಲು ಯಾರು ಅರ್ಹರೆಂದು ಪ್ರಶ್ನೆ ಎದ್ದಾಗ "ಮನಃ ಸೂಕ್ಷ್ಮಂ, ಜ್ಞಾನಯೋಗ್ಯಂ ಶೇಷೋ ವ್ಯಾಖ್ಯಾನ ಗೋಚರಂ " ಅಂದರೆ ಶೇಷ ರುದ್ರ ಮತ್ತು ಗರುಡರಿಗೆ ಜ್ಞಾನ ಗ್ರಹಣಕ್ಕೆ ಸೂಕ್ಷ್ಮ ಮನಸ್ಸು ಎಂದು ಹೇಳಿದೆ. ರುದ್ರನು ಮನಸ್ಸಿನ ಅಭಿಮಾನಿ ದೇವತೆಯಾದುದರಿಂದ ವೇದೋಪನಿಷತ್ತುಗಳನ್ನು ವ್ಯಾಖ್ಯಾನಮಾಡಲು ಸೂಕ್ಷ್ಮ ಮನಸ್ಸುಳ್ಳವನೇ ಬೇಕು ಎಂದಾಯ್ತು. ಎಂದು ಉಲ್ಲೇಖಿಸಿದ ಶ್ರೀ ವಿಜಯ ದಾಸರು ಶಂಕು ಕರ್ಣನ ಅವತಾರರಾದ ಶ್ರೀ ವ್ಯಾಸರಾಯರಲ್ಲಿ ಶೇಷಾವೇಷವಿರುವ ಕಾರಣ, ಶ್ರೀ ಮಧ್ವಾಚಾರ್ಯರ ಸಚ್ಛಾಸ್ತ್ರಕ್ಕೆ ವ್ಯಾಖ್ಯಾನರೂಪವಾದ ಗ್ರಂಥಗಳನ್ನು ರಚಿಸಲು ಯೋಗ್ಯರಾದವರು ಶ್ರೀ ವ್ಯಾಸರಾಯರೇ ಎಂದು ವಿವರಿಸಿದ್ದಾರೆ. ಆದು ದರಿಂದ ಶ್ರೀ ವ್ಯಾಸರಾಯರು ತಾತ್ಪರ್ಯ ಚಂದ್ರಿಕಾ, ತರ್ಕ ತಾಂಡವ, ಮತ್ತು ನ್ಯಾಯಾಮೃತವೆಂಬ ಗ್ರಂಥಗಳನ್ನು ರಚಿಸುವಂತಾಯ್ತು ಎಂದು ಹೇಳಿದ ದಾಸ ಶ್ರೇಷ್ಠರಾದ ಶ್ರೀ ವಿಜಯದಾಸರು, ಶ್ರೀ ವ್ಯಾಸರಾಯರನ್ನು ಈ ರೀತಿ ಕೊಂಡಾಡಿದ್ದಾರೆ–

" ಗುರು ವ್ಯಾಸರಾಯ ಗುರು ವ್ಯಾಸರಾಯ ಶ್ರೀ ಹರಿಗತಿಪ್ರಿಯ
ಶರ್ಕರ ಕ್ಷೀರವ ಕುಡಿಸುವಂದದಿ ಶುಭ ತರ್ಕತಾಂಡವ . . . . .

ಮತ್ತೊಂದು ಕಡೆ " ವ್ಯಾಸಮುನಿಯ ಭಾವ ಗರ್ಭ ಶ್ರೀ ಮಧ್ವಾಚಾರ್ಯರು ಬಲ್ಲರಯ್ಯ " ಎಂದಿದ್ದಾರೆ.

ಶ್ರೀ ವ್ಯಾಸರಾಯರು ಮಧ್ವಮತಕ್ಕೆ, ಹರಿದಾಸಪಂಥಕ್ಕೆ, ಮಾಡಿರುವ ಉಪ ಕಾರವನ್ನು ಶ್ರೀ ವಿಜಯದಾಸರು ಹಾಡಿ ಹೊಗಳಿದ್ದಾರೆ.

ವ್ಯಾಸರಾಯರ ಭಜಿಸಿರಿ ಮರೆಯದಲೆ
ವ್ಯಾಸರಾಯರ ಸ್ಮರಿಸಿರಿ . . . . . .

ಶ್ರೀನಿವಾಸನಾಯಕನಿಗೆ ಬಂದ ವೈರಾಗ್ಯವನ್ನು ಅರ್ಥಮಾಡಿಕೊಂಡು ಅವನಿಗೆ ಪುರಂದರದಾಸರೆಂದು ಅಂಕಿತವಿತ್ತರು. ಶ್ರೀ ವ್ಯಾಸರಾಯರು. ತಮ್ಮ ಗುರುಗಳೂ, ಸ್ವರೂಪೋದ್ಧಾರಕರೂ ಆದ ಶ್ರೀ ವ್ಯಾಸರಾಯರನ್ನು ಶ್ರೀ ಪುರಂದರದಾಸರು ಮುಕ್ತ ಮನಸ್ಸಿನಿಂದ. ಕೃತಜ್ಞತೆ ಸಲ್ಲಿಸುತ್ತ,

ಶ್ರೀ ವ್ಯಾಸರಾಯರ ಚರಣಕಮಲ ದರುಶನವೆನಗೆ
ಏಸುಜನ್ಮದ ಸುಕೃತ ಫಲದೊರಕಿತೋ ಎನ್ನ ।

ಎಂದು ಒಂದುಕಡೆ ನುಡಿದರೆ, ಮತ್ತೊಂದು ಕಡೆ,

‘ ಈಸುಮುನಿಗಳಿದ್ದೇನು ಮಾಡಿದರು ವ್ಯಾಸಮುನಿ ಮಧ್ವಮತನುದ್ಧರಿಸಿದ ’ ಎಂದು ಸಾರಿ ಹೇಳಿದ್ದಾರೆ.

ಪರಮ ಮಧ್ವಮತವೆಂಬ ಸಾಗರದೊಳು ಉದ್ಭವಿಸಿದೆ ಚಂದ್ರನಂತೆ ನೀನು । ಎಂದು ಘೋಷಿಸಿ ಗುರು ವ್ಯಾಸರಾಯರ ಚರಣವೆನಗೆ ಗತಿಯೆಂದು ಭಾವಿಸಿದ ಶ್ರೀ ಪುರಂದರದಾಸರು ತಮ್ಮ ಸಂಪತ್ತಿನ ಹೆಚ್ಚು ಭಾಗವನ್ನು ವ್ಯಾಸರಾಯರು ಸ್ಥಾಪಿಸಿದ ಸರ್ವಜ್ಞ ವಿದ್ಯಾಪೀಠಕ್ಕೆ ಅರ್ಪಿಸಿದರು.

---

**ವ್ಯಾಸರಿಗೊಲಿದ ಶ್ರೀ ಗೋಪಾಲಕೃಷ್ಣ**

ಈಗ ವ್ಯಾಸರಾಜ ಮಠದಲ್ಲಿರುವ ಶ್ರೀ ಗೋಪಾಲಕೃಷ್ಣನ ಪ್ರತಿಮೆಯನ್ನು ಹಿಂದೆ ಶ್ರೀಕೃಷ್ಣನ ಅಷ್ಟಮಹಿಷಿಯರಲ್ಲೊಬ್ಬಳಾದ ಸತ್ಯಭಾಮಾದೇವಿ ಪೂಜಿಸುತ್ತಿದ್ದಳು. ಅವಳಿಂದ ಅರ್ಜುನನಿಗೆ ದೊರೆತು ಕೊನೆಗೆ ಪಾಂಡುವಂಶದ ರಾಜನಾದ ಕ್ಷೇಮಕಾಂತನಿಂದ ಭೂಗತವಾಯಿತು. ಶ್ರೀಪಾದರಾಜರಿಗೆ ಸ್ವಪ್ನ ಸೂಚನೆಯಂತೆ ಭೀಮರಥೀ ತೀರದಲ್ಲಿ ಸ್ವರ್ಣ ಪೆಟ್ಟಿಗೆಯಲ್ಲಿ ಅವು ದೊರೆತು ಅವರ ಶಿಷ್ಯರಾದ ವ್ಯಾಸತೀರ್ಥರಿಗೆ ಶ್ರೀ ಕೃಷ್ಣ ಒಲಿದು ಬಂದ. _ವ್ಯಾಸವಿಜಯ

---

ವ್ಯಾಸರಾಯರಿಂದ ಹರಿದಾಸ ದೀಕ್ಷೆ ಪಡೆದ ಶ್ರೀ ಪುರಂದರದಾಸರು, ಕನ್ನಡ ಭಾಷೆಯಲ್ಲಿ ಸಹಸ್ರಾರು ದೇವರನಾಮಗಳನ್ನು ಪುರಂದರವಿಠಲನ ಅಂಕಿತದಲ್ಲಿ ರಚಿಸಿದರು. ಇದನ್ನು ವ್ಯಾಸರಾಯರೇ “ ಪುರಂದರೋಪನಿಷತ್ತು ” ಎಂದು ಕರೆದು ದಾಸರೆಂದರೆ ಪುರಂದರ ದಾಸರಯ್ಯ ಎಂದು ಹಾಡಿ ಹೊಗಳಿದ್ದಾರೆ. ಶ್ರೀ ವ್ಯಾಸರಾಯರ ಭಕ್ತಿಯನ್ನು. “ ದಾನವಾಂತಕರಂಗ ಮೆಚ್ಚಿ ಜ್ಞಾನಿಗಳರಸಗುರು ವ್ಯಾಸರಾಯ ಏನೆಂಬೆ ನಿನ್ನ ಮಹಿಮೆಯ ” ಎಂದು ಕೊಂಡಾಡಿದ್ದಾರೆ ಪುರಂದರದಾಸರು.

ವ್ಯಾಸರಾಯರ ಮೇಲ್ಪಂಕ್ತಿಯಲ್ಲಿ ನಡೆದು ದ್ವೈತಸಿದ್ಧಾಂತ ವಾಙ್ಮಯ ಭಂಡಾರಕ್ಕೆ ತಮ್ಮ ಅಮೂಲ್ಯ ಕೃತಿರತ್ನಗಳನ್ನು ಕಾಣಿಕೆಯಾಗಿ ಅರ್ಪಿಸಲು ತಮಗೆ ಮೇಲ್ಪಂ

ಕ್ರಿಯನ್ನು ಹಾಕಿಕೊಟ್ಟ ಶ್ರೀ ವ್ಯಾಸರಾಯರನ್ನು ಶ್ರೀ ವಾದಿರಾಜರು, "ವ್ಯಾಸಮುನಿ ರಾಯ ನಿಮ್ಮ ಪೆಸರೇಲೇಸು ಭಾಸುರ ವಿರಕ್ತಿ " ಎಂದು ತಾವು ರಚಿಸಿದ ಹಾಡಿನಲ್ಲಿ ಹೊಗಳುತ್ತಾ, ಮತ್ತೊಂದೆಡೆ ಬ್ರಹ್ಮಜ್ಞಾನಿಗಳಾದ ಶ್ರೀ ವ್ಯಾಸರನ್ನು **ಅತೀ ಶೂರರೆಂದು** ಈ ರೀತಿ ಸ್ತುತಿಸಿದ್ದಾರೆ—

" ವಿದ್ಯಾದಿ ಮಹಾದಾನಗಳ ಪೊಂದಿದವರಿಗಿತ್ತು ಹೃದ್ಯ ಹಯವದನ ಕೃಪಾ ಬಲದಿ ಗೆದ್ದು ರಾಯರ ಕೈಯಿಂದ ಪಟ್ಟವ ಕಟ್ಟಿಸಿಕೊಂಡು ಶುದ್ಧ ಕೀರುತಿ ಪಾತ್ರ ದಿಂದ ಲೋಕದಿ ಬೆಳಗಿದ " ಶ್ರೀ ವ್ಯಾಸರಾಯರನ್ನು ಮದವೇರಿದ ಆನೆಗೆ ಹೋಲಿ ಸುತ್ತಾ, " ಆನೆ ಬರುತಿದಿಕೋ ವ್ಯಾಸರಾಯರೆಂಬೋ ಹದಮೀರಿ ಮದವೇರಿ ಮದ ನಾರಿತನೆಂಬ " ಎಂದು ಮತ್ತೊಂದು ಕಡೆ ಹಾಡಿ ಕುಮತಗಳೆಂಬ ಕಾನನಕ್ಕೆ ವಿಧ್ವಂ ಸಕ ಆನೆಯಂತೆ ನುಗ್ಗಿ ಅವುಗಳನ್ನು ನಾಶಮಾಡಿ ದ್ವೈತಮತ ಉದ್ಧರಿಸಿದರೆಂದು ಅವರನ್ನು ಹೊಗಳಿದ್ದಾರೆ.

ಕುರುಬರ ಕನಕ ವ್ಯಾಸರಾಯರ ಪ್ರಭಾವಕ್ಕೆ ಸಿಲುಕಿ ಕೋಣದ ಮಂತ್ರದ ಮೂಲಕ ಕನಕದಾಸರಾದರು.

ಪರಮಾತ್ಮನನ್ನು ತಮ್ಮ ಭಕ್ತಿ ಸ್ವರೂಪದಿಂದ ಸಾಕ್ಷಾತ್ಕರಿಸಿಕೊಂಡ ಕನಕ ದಾಸರು ಗುರು ಕರುಣದಿಂದಲೂ ಸಾಧನೆಯಿಂದಲೂ ತಮ್ಮ ಜೀವನದ ಸಾಧನೆಯೆಂಬ ಯಾಸೆಯಲ್ಲಿ ಪುಟಗೊಂಡು ಪರಮಾತ್ಮನ ಅನುಗ್ರಹಕ್ಕೆ ಪಾತ್ರರಾಗಿದ್ದರು. ವ್ಯಾಸ ರಾಯರ ಮತ್ತೊಬ್ಬ ಶಿಷ್ಯರೆಂದಿರಾದ ವಿಜಯೀಂದ್ರರು. ವ್ಯಾಸರಾಯರನ್ನು ತಮ್ಮ ಒಂದು ದೇವರನಾಮದಲ್ಲಿ ವಿಚಿತ್ರ ಮೇಘಕ್ಕೆ ಹೋಲಿಸಿ ಆ ಮೇಘದಿಂದ ಲೋಕಕ್ಕಾದ ಉಪಕಾರವನ್ನು ಸ್ಮರಿಸುವ ರೀತಿ ಹೀಗಿದೆ—

ಯೋಗಿ ವ್ಯಾಸರಾಯರೆಂಬ ವಿಚಿತ್ರ ಮೇಘ
ಬೇಗ ವಿಷ್ಣು ಪದವ ತೋರಿಸುತ್ತ ಬಂತಿದಿಕೊ . . . . . .

ವ್ಯಾಸರಾಯರಿಂದ ಅನುಗ್ರಹೀತರಾದ ಶ್ರೀ ವಿಜಯೀಂದ್ರರು ನೂರನಾಲ್ಕು ಗ್ರಂಥ ಗಳನ್ನು ರಚಿಸಿದರೆಂದು ಅನೇಕ ಗ್ರಂಥಗಳಿಂದ ತಿಳಿದುಬರುತ್ತದೆ.

ಶ್ರೀ ವಾದೀಂದ್ರತೀರ್ಥರು ರಚಿಸಿದ ಗುರುಗಣಸ್ತವನದಲ್ಲಿ ನಾಲ್ಕನೇ ಶ್ಲೋಕ ದಲ್ಲಿ ಶ್ರೀ ವ್ಯಾಸರಾಜರನ್ನು ಈ ರೀತಿ ಸ್ತುತಿಸಲಾಗಿದೆ.

ಪರಪದರತಿ ಪಾರ್ಥಃ ಪಾಲಿತ ಚ್ಛಾತ್ರ ಸಾರ್ಥಃ
ಪಟುವಿದಿತನಯಾರ್ಥಃ ಪಾಣಿದತ್ತಾಖಿಲಾರ್ಥಃ ।

ಪರವಿಜಯ ಸಮರ್ಥಃ ಪಾವಿತಾಶೇಷತೀರ್ಥಃ
ಪರಿಮಿಲಿತ ಪುಮರ್ಥಃ ಪಾತು ಮಾಂ ವ್ಯಾಸತೀರ್ಥಃ ॥

ಶ್ರೀ ಪಾದರಾಜರೇ ತಮ್ಮ ಶಿಷ್ಯರನ್ನು ಕುರಿತು,

ಸಾಸಿರ ಜಿಹ್ವೆಗಳುಳ್ಳ ಶೇಷನೇ ಕೊಂಡಾಡಬೇಕು
ವ್ಯಾಸಮುನಿರಾಯರ ಸಂನ್ಯಾಸದಿರಿವ . . . . . .

ಕೊನೆ ಸಾಲಿನಲ್ಲಿ " ಪೊರೆವ ವೈಭವ ಕೀರ್ತಿಯಿಂದಲಿ, ವ್ಯಾಸರಾಯರ ಗುಣ ಗಾಂಭಿರ್ಯಾದಿಗಳ " ಎಂದು ಶ್ಲಾಘಿಸಿದ್ದಾರೆ.

ವ್ಯಾಸ ಸೂತ್ರದಲ್ಲಿ "ದಿರಾವನು ನಿನಗೀ ಧರೆಯೊಳು . . . . . ಎಂದು ಹೊಗಳುತ್ತಾ. " ಹಮ್ಮನಳಿದು ಶ್ರೀಪತಿರಂಗವಿಠಲನ್ನ ಸುಮ್ಮಾನದಿಂ ಸೇವಿಪ ವ್ಯಾಸಮುನಿರಾಯ " ಎಂದು ಕೊನೆಯ ನುಡಿಯಲ್ಲಿ ಪ್ರಶಂಶಿಸಿದ್ದಾರೆ.

ಶ್ರೀ ವ್ಯಾಸರಾಯರ ಅವತಾರತ್ರಯಗಳಲ್ಲಿ ಅವರನ್ನು ಸ್ತುತಿಸಿದ ಹರಿ ಹರಿದಾಸರುಗಳ ಸಂಖ್ಯೆ ಅಪಾರ, ಗಣನೆಗೆ ಸಿಲುಕರಾರದಷ್ಟು.

o o o

---

## ಪ್ರಾಣದೇವರ ಪ್ರತಿಷ್ಠೆ

ವ್ಯಾಸತೀರ್ಥರು 732 ಪ್ರಾಣದೇವರ ವಿಗ್ರಹಗಳನ್ನು ಪ್ರತಿಷ್ಠಿಸಿದ್ದರು. ಇವರಲ್ಲಿ ಯಂತ್ರೋದ್ಧಾರಕ ಪ್ರಾಣದೇವರನ್ನಷ್ಟೆ ಹೆಚ್ಚಿನ ಜನ ತಿಳಿದಿದ್ದಾರೆ. ಉಳಿದವರಲ್ಲಿ ಎಷ್ಟು ಉಳಿದಿದೆಯೋ ನಿಖರವಾಗಿ ಗೊತ್ತಿಲ್ಲ.

ಮೂರ್ತಿ : ಸಪ್ತಶತಂ ಪ್ಲವಂಗಮ ವತೇಃ ದ್ವಾತ್ರಿಂಶದಪ್ಯಂಜನಾ

ಸೂನೋರ್ನಿರ್ಮಮ ಈಶ ತೋಶಣಕೃತೇ ರೌದ್ರ್ಯಾಖ್ಯವ್ಯಯೋಬ್ದೇಶಕೇ

(ವಿದ್ಯಾರತ್ನಕರರು)

ದ್ವಾತ್ರಿಂಶತ್ಸಪ್ತಶತಕೆ ಮ್ಮೂರ್ತೀರ್ಥನುಮತಃ ಪ್ರಭೋ
ಪ್ರತಿಷ್ಠಾತ ಸ್ಮೃತಿಬ್ಯಾಗತಃ . . . . .

ವ್ಯಾಸರಾಜ ಸ್ತೋತ್ರ ವಿಜಯೀಂದ್ರ

---

# ವಿಜಯನಗರದಲ್ಲಿ ಗುರುಸಾರ್ವಭೌಮರು

ಶ್ರೀಮತಿ ರುಕ್ಮಿಣಿ ಗಿರಿಮಾಜಿ, ಎಂ. ಎ.

ಕರ್ನಾಟಕ ರತ್ನಸಿಂಹಾಸನದ ಮೇಲೆ ವಿಜಯನಗರದಲ್ಲಿ ವಿರೂಪಾಕ್ಷ ಚಕ್ರವರ್ತಿ ಕುಳಿತಿದ್ದ ಕಾಲವದು. ಆತ ವೈಷ್ಣವ ಮತಾನುಯಾಯಿ. ಶ್ರೀನಿವಾಸ ಅವನ ಇಷ್ಟ ದೈವ. ಆದರೆ ಆಗಿನ ತಿರುಪತಿಯ ಅರ್ಚಕರ ಅವಾಂತರ ವಿಪರೀತ. ದೇವರ ಆಭರಣಗಳನ್ನು ಧರಿಸುವುದು, ದೇವರ ವಾಹನಗಳ ಮೇಲೆ ಕೂಡುವುದು, ತಾವೇ ದೇವರಂತೆ ವರ್ತಿಸುವುದು ಇತ್ಯಾದಿ. ಇದು ಪ್ರಜೆಗಳಿಗೆ ಸಹ್ಯವಾಗದಿದ್ದರೂ ಚಕ್ರವರ್ತಿಯೇ ಅವರ ವಶವರ್ತಿಯಾಗಿರುವಾಗುಪ್ರಜೆಗಳೇನು ಮಾಡಿಯಾರು ? ಆದರೆ ವಿಜಯನಗರದ ಸಾಮಂತ ರಾಜನಾದ ಸಾಳುವ ನರಸಿಂಹನಿಗೆ ಇದು ಸಹನವಾಗಲಿಲ್ಲ. ಅವನು ಮಹಾ ಪರಾಕ್ರಮಿ. ವಿರೂಪಾಕ್ಷನಿಗೆ ಸಹಾಯಕನಾಗಿ ಅನೇಕ ಯುದ್ಧಗಳಲ್ಲಿ ಜಯಗಳಿಸಿಕೊಟ್ಟಿದ್ದನು. ಇಂಥವನು ಹೇಳಿದರೂ ವಿರೂಪಾಕ್ಷನ ಅರ್ಚಕರ ವ್ಯಾಮೋಹ ಹೋಗಲಿಲ್ಲ. ಕೋಪಗೊಂಡ ಸಾಳುವ ನರಸಿಂಹನು ವಿರೂಪಾಕ್ಷನನ್ನು ಮೂಲೆ ಗುಂಪಾಗಿಸಿ ತಾನೇ ಸಿಂಹಾಸನವನ್ನೇರಿದನು. ಇದು ಇತರ ಮಾಂಡಲಿಕರಿಗೂ ಒಪ್ಪಿಗೆಯಾಗಿತ್ತು. ಸಾಳುವ ನರಸಿಂಹನು ಚಂದ್ರಗಿರಿಯನ್ನೇ ವಿಜಯನಗರದ ರಾಜಧಾನಿಯಾಗಿ ಮಾಡಿಕೊಂಡು ಮೊದಲು ತಿರುಪತಿಯ ಅರ್ಚಕರ ಕುಲವನ್ನು ನಾಶಮಾಡಿದನು. ಬ್ರಹ್ಮಹತ್ಯಾ ದೋಷ ನಿವಾರಣೆಗಾಗಿ ತನ್ನ ಗುರುಗಳಾದ ಶ್ರೀಪಾದರಾಜರ ಮೊರೆಹೊಕ್ಕನು. ಅವರು ಚಂದ್ರಗಿರಿಗೆ ಬಂದು ರಾಜನ ದೋಷನಿವಾರಣೆ ಮಾಡಿದರು. ರಾಜನು ಗುರುಗಳನ್ನು ತನ್ನ ರತ್ನಸಿಂಹಾಸನದ ಮೇಲೆ ಕುಳ್ಳಿರಿಸಿ ರತ್ನಾಭಿಷೇಕ ಮಾಡಿದನು. ಚಂದ್ರಗಿರಿಯಲ್ಲೇ ಅವರು ವಾಸ್ತವ್ಯ ಮಾಡಬೇಕೆಂದು ಕೇಳಿಕೊಂಡನು. ಆದರೆ ರಾಜರಿಗೆ ವಯಸ್ಸಾಗಿತ್ತು. ಅಲ್ಲದೆ ಮುಳುಬಾಗಿಲಿನಲ್ಲಿದ್ದುಕೊಂಡೇ ಮಾಡಬೇಕಾದ ಬಹಳ ಕೆಲಸವಿತ್ತು. ತಮ್ಮ ಶಿಷ್ಯರಾಗಿದ್ದ ವ್ಯಾಸತೀರ್ಥರನ್ನು ಕಳಿಸಿಕೊಡುವುದಾಗಿ ರಾಜನನ್ನು ಒಪ್ಪಿಸಿ ಬಂದಿದ್ದರು.

ವ್ಯಾಸತೀರ್ಥರು ಬಂದರು. ದೂರದಿಂದಲೇ ನೆತ್ತಿಯ ಮೇಲೆ ಕರಗಳನ್ನು ಜೋಡಿಸಿ ಹಾಡುತ್ತಾ ಬಂದರು. " ಮಹಿಮೆ ಸಾಲದೇ, ಇಷ್ಟೇ ಮಹಿಮೆ ಸಾಲದೇ " ಶಿಷ್ಯನನ್ನು ನೋಡಿದಷ್ಟೂ ಹಿಗ್ಗು ಗುರುಗಳಿಗೆ. ಒಬ್ಬೊಬ್ಬರಲ್ಲಿ

ಒಂದೊಂದು ಗುಣಗಳಿದ್ದರೆ ನಿಮ್ಮಲ್ಲಿ ಸಕಲ ಸದ್ಗುಣಗಳೂ ತುಂಬಿ ತುಳುಕಾಡುತ್ತಿವೆ ಯೆಂದರು. ಅವರ ಮನ ಒಲಿಸಿ ಸಾಳುವ ರಾಜನಲ್ಲಿಗೆ ಕಳುಹಿಸಿದರು.

ಸಾಳುವ ರಾಜನಾದರೋ ಬಹಳ ವೈಭವದಿಂದ ವ್ಯಾಸತೀರ್ಥರನ್ನು ಬರ ಮಾಡಿಕೊಂಡ. ವಿಷಯವನ್ನರಿತ ವ್ಯಾಸರಾಜರು ತಾವೇ ಶ್ರೀನಿವಾಸನ ಪೂಜೆಯ ಭಾರ ಹೊತ್ತರು. ಅವರಿಗೆ ಇಡೀ ಬೆಟ್ಟ ಶಾಲಿಗ್ರಾಮ ಶಿಲೆಯಾಗಿ ಕಂಡಿತು. ದೇವಾಲಯದ ಸಂಪೂರ್ಣ ಆಧಿಪತ್ಯ ಅವರದಾಯಿತು. ಅವರು ವೈಖಾನಸ ಪದ್ಧತಿ ಯನ್ನು ತಪ್ಪಿಸಿ ತಂತ್ರಸಾರೋಕ್ತ ವಿಧಿಯಿಂದ ಪೂಜಾ ವಿಧಾನಗಳನ್ನೇರ್ಪಡಿಸಿದರು. ಬೆಟ್ಟವನ್ನು ಮೊಣಕಾಲಿನಿಂದ ಹತ್ತುತ್ತಿದ್ದರು. ಪ್ರತಿ ಗುರುವಾರ ಚಂದ್ರಗಿರಿಯಿಂದ ತಿರುಮಲೆಗೆ ಹೊರಟು ರವಿವಾರ ಹಿಂದಿರುಗುತ್ತಿದ್ದರು. ಸ್ವಹಸ್ತದಿಂದ ಶುಕ್ರವಾ ರದ ದಿನ ಸ್ವಾಮಿಗೆ ಪುಳಕಾಭಿಷೇಕ ಮಾಡುತ್ತಿದ್ದರು. ಹೀಗೆ ಹನ್ನೆರಡು ವರ್ಷ ಕಾಲ ಶ್ರೀಪತಿಯ ಸೇವೆ ಮಾಡಿ ದೇವಾಲಯದ ಆಡಳಿತವನ್ನೆಲ್ಲಾ ಕ್ರಮಪಡಿಸಿ ಅರ್ಚ ಕನ ಪೀಳಿಗೆಯಲ್ಲಿ ಜನಿಸಿದ್ದ ಕುಮಾರನು ಪ್ರಾಪ್ತ ವಯಸ್ಕನಾಗಲು ಅವನಿಗೆ ದೇವಾ ಲಯದ ಆಡಳಿತವನ್ನೊಪ್ಪಿಸಿ ಚಂದ್ರಗಿರಿಗೆ ಬಂದುಬಿಟ್ಟರು.

ಸಾಳುವ ನರಸಿಂಹನಿಗೆ ರಾಜ್ಯಭಾರದಲ್ಲಿ ಮಾರ್ಗದರ್ಶಕರಾಗಿದ್ದರು. ಅವನು ಹೋಗುತ್ತಿದ್ದ ಪ್ರತಿ ಜೈತ್ರಯಾತ್ರೆಯಲ್ಲಿಯೂ ಅವನ ಜೊತೆಗೂಡಿ ಇರುತ್ತಾ ಸಕಲ ತೀರ್ಥಕ್ಷೇತ್ರಗಳನ್ನು ಸಂದರ್ಶಿಸಿ, ವಾದಿನಿಗ್ರಹ ಮಾಡಿ ಅಲ್ಲೆಲ್ಲಾ ವಿಷ್ಣು ಮತವನ್ನು ವಿಸ್ತಾರಗೊಳಿಸಿದರು.

---

## ತಿರುಪತಿ ಮತ್ತು ವ್ಯಾಸರಾಜರು

ಅದು ಶ್ರೀಕೃಷ್ಣದೇವರಾಯನ 1524ನೆಯ ವರ್ಷದ್ದೆಂದು ಹೇಳಲಾಗುವ ಕೊನೆಯ ಶಾಸನ. ಅದರಲ್ಲಿ ವ್ಯಾಸರಾಜರನ್ನು (ಶ್ರೀಪಾದರಾಜ ಒಡೆಯರು) ಪರಮಹಂಸ ಪರಿ ವ್ರಾಜಕರೆಂದೂ, ಬ್ರಹ್ಮಣ್ಯತೀರ್ಥರ ಕರಕಮಲ ಸಂಜಾತರೆಂದೂ, ಸಕಲವಿದ್ವಜ್ಜನ ಪೂಜಿತ ರೆಂದೂ, ದುರ್ವಾದಿ ಗರ್ವಸರ್ವಸ್ವಾಪಹಾರಕ ಶ್ರೀಮದ್ವೈಷ್ಣವ ಪ್ರತಿಷ್ಠಾಪನಾಚಾರ್ಯ ರೆಂದೂ ಸಂಬೋಧಿಸಿ ಅನೇಕ ಭೂಭಾಗಗಳನ್ನು ಅವರಿಗೆ ದಾನಮಾಡಿದ್ದು ಕಂಡು ಬರುತ್ತದೆ.

ಇದರಲ್ಲಿ ಒಂದು ಬೆಟ್ಟದ ಮೇಲಿರುವ ಸ್ವಾಮಿ ಪುಷ್ಕರಣಿಯ ಉತ್ತರ ಭಾಗದಲ್ಲೂ ಇನ್ನೊಂದು ಬೆಟ್ಟದ ಕೆಳಗೆ ಗೋವಿಂದರಾಜ ಸ್ವಾಮಿಯ ದೇವಾಲಯದ ಉತ್ತರಭಾಗದಲ್ಲೂ ಇದ್ದರ, ಪಾಪನಾಶಿನಿಗೆ ಹೋಗುವ ದಾರಿಯಲ್ಲಿ ಶ್ರೀಗಳವರಿಗೆ ತಂಗಲು ಒಂದು ಮನೆ ಯನ್ನೂ ಕೊಟ್ಟ ಉಲ್ಲೇಖವಿದೆ. ಅಲ್ಲದೆ ವ್ಯಾಸರಾಯರಿಗೆ 'ಪರಟ್ಟಾತಿ ತಿರುನಾಳಿನ ಮಾರಾಯ' ಎಂಬ ಸೇವಾರ್ಥದಲ್ಲಿ ಒಂದು ಭಾಗವನ್ನು ಕೊಡಬೇಕೆಂದು ಉಲ್ಲೇಖಿಸಲಾಗಿದೆ.

(ಶ್ರೀ ಕ್ಷೇತ್ರ ತಿರುಪತಿ–ಆದ್ಯರಾಮಾಚಾರ್ಯ)

---

ಸಾಳುವ ನರಸಿಂಹನ ನಿಧನಾನಂತರ ಅವನ ಮಗ ತಮ್ಮಾರಾಯನು ಪಟ್ಟವನ್ನೇರಿದನು. ಆದರೆ ಅವನು ಇನ್ನೂ ಎಳೆಯನಾಗಿದ್ದುದರಿಂದ ವ್ಯಾಸರಾಜರಿಗೆ ಅವನ ರಕ್ಷಣೆ ಮಾಡುವುದು ಆವಶ್ಯಕವಾಯಿತು. ಅವನ ಪರವಾಗಿ ನರಸನಾಯಕನು ರಾಜ್ಯಕಾರ್ಯಗಳನ್ನು ನೋಡಿಕೊಳ್ಳುತ್ತಿದ್ದನು. ಅವನಿಗೆ ಮಂತ್ರಾಲೋಚನೆಯಲ್ಲಿ ಸಮರ್ಥರಾದ ಮಾರ್ಗದರ್ಶಿಯೊಬ್ಬರು ಬೇಕಾಗಿತ್ತು. ಅವನು ಚಂದ್ರಗಿರಿಯಿಂದ ವ್ಯಾಸರಾಜರನ್ನು ಕರೆಸಿಕೊಂಡು ಭವ್ಯ ಸ್ವಾಗತ ನೀಡಿ ಮುದ್ರಾಸನಗಲ್ಲಿ ಕೂಡಿಸಿದನು. ಜನರಿಗೆ ಇದರಿಂದ ತುಂಬಾ ತೃಪ್ತಿಯಾಯಿತು. ವ್ಯಾಸತೀರ್ಥರು ರಾಜ್ಯದ ಅಭಿವೃದ್ಧಿ ಕಾರ್ಯಗಳಿಗೆ ಮನಕೊಟ್ಟರು. ರಾಜ್ಯದ ಖ್ಯಾತಿ ಪರದೇಶಗಳಿಗೂ ತಲುಪಿತು. ರಾಯಭಾರಿಗಳು ವ್ಯಾಸರಾಜರ ಮುತ್ಸದ್ದಿತನವನ್ನು ಬಿಜಾಪುರದ ಸುಲ್ತಾನ ಆದಿಲ್‌ಶಹನಿಗೆ ತಲುಪಿಸಿದರು. ಆದಿಲ್‌ಶಹನು ವ್ಯಾಸರಾಜರಿಗೆ ಪ್ರತ್ಯೇಕವಾಗಿ ಬಿರುದಾವಳಿಗಳನ್ನೂ, ಹಸಿರು ಛತ್ರಿಯನ್ನೂ, ಹಸಿರು ನಿರಾನಿಯನ್ನೂ ಕಳಿಸಿಕೊಟ್ಟು ಅವರು ಸಂಚಾರ ಮಾಡುವಾಗ ಅವುಗಳನ್ನು ಉಪಯೋಗಿಸಬೇಕೆಂದು ವಿನಮ್ರನಾಗಿ ಕೇಳಿಕೊಂಡನು.

ಇಡೀ ರಾಜ್ಯವು ತಮ್ಮ ಕೈಲಿದ್ದರೂ ವ್ಯಾಸತೀರ್ಥರು ಎಂದೂ ಗರ್ವಪಡಲಿಲ್ಲ. " ಶ್ರೀಕೃಷ್ಣಾ, ಇದೆಲ್ಲಾ ನಿನ್ನದು " ಎನ್ನುತ್ತಿದ್ದರು. ಅವರು ಅಜಾತ ಶತ್ರುಗಳಾಗಿದ್ದರು. ಎಲ್ಲ ಮತದವರನ್ನೂ ಒಂದೇ ಸಮನಾಗಿ ಕಾಣುತ್ತಿದ್ದರು. ಅವರ ವಿದ್ವತ್ತಿಗನುಗುಣವಾಗಿ ಮರ್ಯಾದೆ ಮಾಡುತ್ತಿದ್ದರು. ತಮ್ಮ ವಾಸಕ್ಕೆ ಮಂಟಪವೇ ಸಾಕೆಂದು ಚಕ್ರತೀರ್ಥದ ಬಳಿ ಮಂಟಪದಲ್ಲಿ ವಾಸಿಸುತ್ತಿದ್ದರು.

ಇತ್ತ ನರಸನಾಯಕನೂ ಮೃತನಾದನು. ತಮ್ಮಾರಾಯನಿಗೂ ಸಂತತಿಯಿರಲಿಲ್ಲ. ಹೀಗಾಗಿ ನರಸನಾಯಕನ ಮಗನಾದ ವೀರನರಸಿಂಹ ಭೂಪತಿಯು ಪಟ್ಟಕ್ಕೆ ಬಂದನು. ಇವನೂ ಬಹಳ ದಿನಗಳು ಬದುಕಲಿಲ್ಲ. ನಂತರ ಬಂದವನೇ ಇತಿಹಾಸ ಪ್ರಸಿದ್ಧನಾದ ಶ್ರೀ ಕೃಷ್ಣದೇವರಾಯ.

ಇವನ ಕಾಲದಲ್ಲಿ ಕರ್ನಾಟಕ ರಾಜ್ಯವು ಕಾವೇರಿಯಿಂದ ನರ್ಮದೆಯವರೆಗೆ ವಿಸ್ತರಿಸಿತ್ತು. ರಾಜ್ಯವು ಸುಭಿಕ್ಷವಾಗಿ ರಾಮರಾಜ್ಯವೆನಿಸಿತು. ವ್ಯಾಸರಾಜರಂತೂ ಶ್ರೀ ಕೃಷ್ಣದೇವರಾಯನ ಹಾಗೂ ರಾಜ್ಯದ ಸಕಲ ಅಭ್ಯುದಯಕ್ಕೂ ಕಾರಣಕರ್ತರಾದರು. ಅನೇಕ ಮಾಂಡಲಿಕರು ವ್ಯಾಸರಾಜರಿಗೆ ರತ್ನಾಭಿಷೇಕ ಮಾಡಿ ಧನ್ಯರಾದರು. ಕೃಷ್ಣದೇವರಾಯನಿಗಂತೂ ವ್ಯಾಸರಾಜರನ್ನು ಎಷ್ಟು ಪೂಜಿಸಿದರೂ ಸಾಲದೆನ್ನಿಸುತ್ತಿತ್ತು. ಮಹಾ ವಿರಕ್ತರಾಗಿದ್ದ ಅವರಿಗೆ ಏನೂ ಬೇಡವಾಗಿತ್ತು. ಆದರೂ ರಾಯನು ಬಹಳ ಉತ್ಸವದಿಂದ ರಾಜರಿಗೆ ನವರತ್ನಾಭಿಷೇಕ ಮಾಡಿದನು.

ಧರ್ಮಭೀರುವಾದ ಕೃಷ್ಣದೇವರಾಯನಿಗೂ ಆಪತ್ತು ತಪ್ಪಲಿಲ್ಲ. ಅವನಿಗೆ

ಕುಹುಯೋಗದ ದುಷ್ಫಲವಿತ್ತು. ವ್ಯಾಸರಾಜರು ಅವನಿಂದ ರಾಜ್ಯವನ್ನು ದಾನ ವಾಗಿ ಪಡೆದು, ತಾವು ಸಿಂಹಾಸನದ ಮೇಲೆ ಕುಳಿತು ಕುಹುಯೋಗವನ್ನು ನಿವಾರಿಸಿ ದರು. ನಂತರ ಸಿಂಹಾಸನವನ್ನು ಅವನಿಗೇ ಒಪ್ಪಿಸಿದರು. ಅವನು ಅದನ್ನು ತೆಗೆದು ಕೊಳ್ಳಲು ಒಪ್ಪದಿದ್ದಾಗ ಸನ್ಯಾಸಿಗಳಿಗೆ ರಾಜ್ಯಾಧಿಕಾರವು ನಿಷಿದ್ಧವಾಗಿರುವುದರಿಂದ ಅವನು ಅದನ್ನು ತೆಗೆದುಕೊಳ್ಳುವುದರಲ್ಲಿ ಏನೂ ತೊಂದರೆಯಿಲ್ಲವೆಂದು ಹೇಳಿ ಅವನಿಗೇ ಒಪ್ಪಿಸಿದರು.

ಕೃಷ್ಣದೇವರಾಯನ ಕಾಲದಲ್ಲಿ ಬಾಬರ್ ಚಕ್ರವರ್ತಿಯು ಸಹಾ ವ್ಯಾಸರಾಜರಿಗೆ ರಾಯಭಾರಿಗಳ ಮೂಲಕ ಮರ್ಯಾದೆಗಳನ್ನು ಕಳುಹಿಸಿದನು. ಅಲ್ಲದೆ ಪೋರ್ಚು ಗೀಸ್ ರಾಯಭಾರಿಗಳು ವ್ಯಾಸರಾಜರ ದರ್ಬಾರಿಗೆ ಬಂದು ಕಾಣಿಕೆಗಳನ್ನರ್ಪಿಸಿದರು.

---

### ನನಗೆ ಹೆಂಡಿರಿಲ್ಲವೇ ?

"ನೀನಂತು ಸನ್ಯಾಸಿ ನಿನಗೆ ಹೆಂಡಿರಿಲ್ಲ ನನಗಿಲ್ಲವೆ ? ಶ್ರೀಕೃಷ್ಣನೆಂದು ಅಂಕಿತ ಮಾಡು" ಇದು ಗೋಪೀಜಾರ ಶ್ರೀ ಕೃಷ್ಣನ ಸೂಚನೆ. ವ್ಯಾಸತೀರ್ಥರು 'ಕೃಷ್ಣ' ಎಂಬ ಅಂಕಿತವನ್ನಿಟ್ಟುಕೊಂಡು ದೇವರನಾಮ ರಚಿಸುತ್ತಿದ್ದರು. ಕೃಷ್ಣ ಅವರಿಗೆ ಮೇಲಿ ನಂತೆ ಸೂಚನೆ ಕೊಟ್ಟ. ಆಮೇಲೆ 'ಶ್ರೀ' ಯನ್ನೂ ಅವನ ಜೊತೆ ಸೇರಿಸಿದರು.

---

ಕೃಷ್ಣದೇವರಾಯನ ಅಳಿಯ ರಾಮರಾಯನ ಕಾಲದವರೆಗೂ ಇದಕ್ಕೂ ಮುಂಚೆ ಸಾಳುವ ನರಸಿಂಹ, ತಮ್ಮಾನಾಯಕ, ನರಸನಾಯಕ, ವೀರ ನರಸಿಂಹ ಭೂಪತಿ ಇವರೆಲ್ಲರಿಗೂ ವ್ಯಾಸರಾಜರು ರಾಜ್ಯಕಾರ್ಯಗಳಲ್ಲಿ ಮಾರ್ಗದರ್ಶಕರಾಗಿ ದ್ದರು. ಕೃಷ್ಣದೇವರಾಯನ ಮರಣಾ ನಂತರ ಅವರಿಗೆ ಲೌಕಿಕದಲ್ಲಿ ಜಿಗುಪ್ಸೆ ಯಾಯಿತು. ರಾಯನ ಮರಣ ಅಂತಹ ವಿರಕ್ತರ ಮನವನ್ನೂ ಕಲಕಿತು. ಅಳಿಯ ರಾಮರಾಜನ ದುರ್ವತನೆಗಳಿಂದ ತಪಿಸಿಹೋದರು, ಆದರೂ ತಮ್ಮ ಕಾರ್ಯದಿಂದ ಮಾತ್ರ ವಿಚಲಿತರಾಗಲಿಲ್ಲ.

ಅವರು ಜೀವಿಸಿದ್ದು ತೊಂಬತ್ತೆರಡು ವರ್ಷಗಳ ಕಾಲ. ಎಪ್ಪತ್ತು ವರ್ಷ ಗಳಷ್ಟು ದೀರ್ಘಕಾಲ ಸಂಸ್ಥಾನಾಧಿಪತ್ಯ ಮಾಡಿದರು, ಅದರಲ್ಲಿ ಅರವತ್ತು ವರ್ಷ ಗಳು ವಿಜಯನಗರ ಸಾಮ್ರಾಜ್ಯದ ಮಹಾ ಸಂರಕ್ಷಕರಾಗಿ ದಕ್ಷತೆಯಿಂದ ರಾಜ್ಯಾಡಳಿತ ವನ್ನು ಒಂದು ಹದಕ್ಕೆ ತಂದು ಕರ್ನಾಟಕಕ್ಕೆ ಸುವರ್ಣಕಾಲವನ್ನು ತಂದ ಕೀರ್ತಿ ಅವರದು ಅವರು 'ಯತಿರಾಜ' ರಂತೆಯೇ 'ಯತಿಸಾರ್ವಭೌಮರೂ' ಅಹುದು, ಏಕೆಂದರೆ ಇವರಷ್ಟು ದೀರ್ಘಕಾಲ ಪ್ರಪಂಚದ ಇತಿಹಾಸದಲ್ಲಿ ಯಾವುದೇ ಸನ್ಯಾಸಿ ಲೌಕಿಕ, ವೈದಿಕಗಳನ್ನು ಸಾಧಿಸಲಿಲ್ಲ.

# ಶ್ರೀವ್ಯಾಸರಾಜ ಗ್ರಂಥ ಪ್ರಶಸ್ತಿ

---

ವಿದ್ವಾನ್ ಆಚಾರ್ಯ ಸಾಣೂರು
ಭೀಮಭಟ್-

( ಸುಮಾರು 70 ವರ್ಷಗಳ ಹಿಂದೆ ಇದ್ದ ಚಿಂಚೋಳೀ ಅಪ್ಪರಾಯಚಾರ್ಯರೆಂಬ ವಿದ್ವಾಂಸರು ಮೂಲ ಟೀಕಾ ಟಿಪ್ಪಣ್ಯಾಚಾರ್ಯಾಣಾಂ ತತ್ಕೃತೀನಾಂ ನಾಮಸಂಕೀರ್ತನಸ್ತೋತ್ರ ಎಂಬ ಚಿಕ್ಕ ಗ್ರಂಥವನ್ನು ಬರೆದಿರುತ್ತಾರೆ. ಆದರಿಂದ ಶ್ರೀ ವ್ಯಾಸತೀರ್ಥರಿಗೆ ಸಂಬಂಧಿಸಿರುವ ಭಾಗವನ್ನು ಉದ್ಧರಿಸಿ ಇಲ್ಲಿ ಕೊಡಲಾಗಿದೆ.)

ಅಥಖಿಲು ಕಂಸಧ್ವಂಸಪದಾಂಭೋಜ್ಯಸಂಸಕ್ತಾನಾಂ ಪರಮಹಂಸಕುಲಾವತಂಸಾನಾಂ ಶ್ರೀ ಬ್ರಹ್ಮಣ್ಯತೀರ್ಥಪೂಜ್ಯಪಾದಾನಾಂ ಶಿಷ್ಯಃ ಶ್ರೀ ಪಾದರಾಜಸಂಜ್ಞಿತಾತ್ ಶ್ರೀ ಲಕ್ಷ್ಮೀನಾರಾಯಣತೀರ್ಥಾತ್ ಯತಿಕುಲತಿಲಕಾತ್ ಅಧೀತ ಶ್ರೀ ಮನ್ವಧ್ವಶಾಸ್ತ್ರಾಮೃತಃ ಶ್ರೀ ರಾಜರಾಜೇಶ್ವರಮೂರ್ತಿ ಸನ್ನಿಧಾನಪಾತ್ರಭೂತಃ ಶ್ರೀ ವ್ಯಾಸರಾಜಪೂಜ್ಯಚರಣಃ ದುರ್ವಾದಿಮಾತಂಗನಿಕರಾಣಾಂ ಅತಿಭಯಂಕರಃ, ಮೃಗರಾಜ ಇವ ರಾಜಮಾನಃ, ಟೀಕಾಪ್ರತಿಷ್ಠಾಪನಾಚಾರ್ಯಃ ಭೂತ್ವಾ ಬಹುಶಿಷ್ಯಜನನಿಕರಕಿರಣಸಂಪನ್ನಃ ಸೂರ್ಯ ಇವ ಜಾಜ್ವಲ್ಯಮಾನಃ ಸನ್ ದುರ್ಜನ ಕಂಟಕದ್ರುಮಾಣಾಂ ಕಠೋರಕುಠಾರಪ್ರಾಯಾನ್ ಗ್ರಂಥಂಶ್ಚಕಾರ.

ನ್ಯಾಯಾಮೃತಂ ಚಂದ್ರಿಕಾಂ ಚ ತರ್ಕತಾಂಡವ ಸಂಜ್ಞಿತಂ ।
ಮಂದಾರಮಂಜರೀ ಗ್ರಂಥಚತುಷ್ಕಂಕೃತವಾನ್ ಪ್ರಭುಃ ॥

ಸ ಭೇದೋಜ್ಜೀವನಂ ಚಕ್ರೇ ಸರ್ವವಿದ್ವತ್ಸುಸಂಮತಃ ।
ಟೀಕಾಯಾಃ ಟಿಪ್ಪಣೀಗ್ರಂಥಕರಣೇ ಮೂಲಕಾರಣಂ ॥

ವ್ಯಾಸರಾಜಮುನಿಂ ಸೇವೇ ಮುನೀಡ್ಯಚರಣಂ ಸದಾ ॥

ಕಂಸ ಸಂಹಾರಕನಾದ ಶ್ರೀ ಕೃಷ್ಣನ ಪದಕಮಲದಲ್ಲಿ ನಿರಂತರದಲ್ಲಿಯೂ ಆಸಕ್ತರಾದ ಶ್ರೀಮದ್ ಬ್ರಹ್ಮಣ್ಯತೀರ್ಥರೆಂಬ ಪೂಜ್ಯಚರಣರು ಇದ್ದರು. ಪರಮ ಹಂಸ ಸನ್ಯಾಸಿ ಕುಲಭೂಷಣರಾದ ಅವರ ಶಿಷ್ಯರು ಶ್ರೀವ್ಯಾಸರಾಜರು. ಇವರು ಶ್ರೀಪಾದರಾಜ ಎಂಬ ಅನ್ವರ್ಥಕ ಬಿರುದನಾಮದಿಂದ ಜಗದ್ ವಿಖ್ಯಾತರಾದ ಯತಿ

ಕುಲ ತಿಲಕರಾದ ಶ್ರೀ ಲಕ್ಷ್ಮೀನಾರಾಯಣತೀರ್ಥರಿಂದ ಶ್ರೀಮನ್ಮಧ್ವ ಶಾಸ್ತ್ರಾಮೃತ ವನ್ನು ಪಾನ ಮಾಡಿದರು. ಶ್ರೀ ರಾಜರಾಜೇಶ್ವರನೆಂಬ ಹೆಸರಿನ ಮೂರ್ತಿಯ ಸನ್ನಿಧಾನಕ್ಕೆ ಪಾತ್ರರಾದ ಇವರು ದುರ್ವಾದಿಗಳೆಂಬ ಗಜಗಳಿಗೆ ಸಿಂಹದಂತಿದ್ದರು. ಶ್ರೀಮಜ್ಜಯತೀರ್ಥರ ಟೀಕೆಗಳನ್ನು ಸರಿಯಾಗಿ ವ್ಯಾಖ್ಯಾನಿಸಿದ ಇವರು ಟೀಕಾ ಪ್ರತಿಷ್ಠಾಪನಾಚಾರ್ಯರೆಂದು ಪ್ರಸಿದ್ಧರಾದರು, ಅನೇಕ ಶಿಷ್ಯಜನ ಸಮೂಹವೆಂಬ ಕಿರಣಗಳಿಂದ ಕೂಡಿದ ಇವರು ಸೂರ್ಯನಂತೆ ಪ್ರಕಾಶಿಸುತ್ತಾ, ದುರ್ವಾದಿಗಳೆಂಬ ಮುಳ್ಳುಗಿಡಗಳಿಗೆ ಕಠೋರಕುಠಾರ (ಕೊಡಲಿ) ದಂತಿರುವ ಗ್ರಂಥಗಳನ್ನು ಬರೆದರು.

ನ್ಯಾಯಾಮೃತ, ಚಂದ್ರಿಕಾ, ತರ್ಕತಾಂಡವ, ಮಂದಾರ ಮಂಜರೀ ಚತುಷ್ಟಯ, ( ಮಾಯಾವಾದಖಂಡನ, ಮಿಥ್ಯಾತ್ವಾನುಮಾನಖಂಡನ, ಉಪಾಧಿ ಖಂಡನ, ತತ್ತ್ವವಿವೇಕ ಎಂಬ ಆಚಾರ್ಯರ ಮೂಲ ಗ್ರಂಥಗಳಿಗೆ ಜಯತೀರ್ಥರು ಬರೆದಿರುವ ಟೀಕೆಗಳಿಗೆ ಪ್ರೌಢವಾದ ಮಂದಾರಮಂಜರೀ ಎಂಬ ಹೆಸರಿನ ನಾಲ್ಕು ಟಿಪ್ಪಣಿಗಳು ) ಭೇದೋಜ್ಜೀವನ ಎಂಬ ಎಂಟು ಗ್ರಂಥಗಳನ್ನು ಶ್ರೀವ್ಯಾಸತೀರ್ಥ ಪೂಜ್ಯ ಚರಣರು ಬರೆದಿರುತ್ತಾರೆ. ಇವರು ಎಲ್ಲಾ ವಿದ್ವಾಂಸರಿಗೂ ಅತ್ಯಂತ ಮಾನ್ಯರಾಗಿದ್ದಾರೆ. ಇವರು ಸಂಪ್ರದಾಯಾರ್ಥವನ್ನು ತಿಳಿದವರಲ್ಲಿ ಅತ್ಯಂತ ಶ್ರೇಷ್ಠರು, ಶ್ರೀಮಜ್ಜಯತೀರ್ಥರ ಟೀಕಾ ಗ್ರಂಥಗಳಿಗೆ ಟಿಪ್ಪಣೀ ಗ್ರಂಥಗಳನ್ನು ಬರೆಯಲು ಪ್ರಾರಂಭಿಸಿ ದಾರಿ ತೋರಿಸಿ ಯಶಸ್ವಿಯಾಗಿ ಆ ಕಾರ್ಯವನ್ನು ಮಾಡಿದ ಮಹಾನು ಭಾವರಿವರು. ಎಲ್ಲಾ ಮುನಿಗಳಿಂದಲೂ ಸ್ತುತ್ಯರಾದ ಇಂತಹ ಶ್ರೀಮದ್ ವ್ಯಾಸ ರಾಜಮುನಿಗಳನ್ನು ಸೇವಿಸುತ್ತೇನೆ.

---

## " ವ್ಯಾಸಮುನಿಗಳ ಪ್ರವಚನ "

ಮೃದುವಾದ ಹತ್ತಿಯ ಪರಿಧಾನ, ಕಂಬಳಿಯ ಹಾಸು, ಇವುಗಳುಳ್ಳ ಆಸ್ಥಾನ ಮಂಟಪ. ಭಿಕ್ಷೆ ಮುಗಿದು ತೀರ್ಥಸೇವನೆ ಮಾಡಿ ವ್ಯಾಸತೀರ್ಥರು ಅದನ್ನು ಅಲಂಕರಿಸಿ ದ್ದಾರೆ. ಅನೇಕ ಮಂದಿ ಶ್ರೋತೃಗಳು ಸೇರಿದ್ದಾರೆ. ಪಕ್ಕದಲ್ಲಿ ವಿದ್ವಾಂಸ ಶಿಷ್ಯನೊಬ್ಬ ಭಾಗವತ ಶ್ಲೋಕಗಳನ್ನು ಓದುತ್ತಿದ್ದಾನೆ. ಇಂಪಾದ ಸ್ವರ. ಅದರ ತಾತ್ಪರ್ಯವನ್ನು ಶ್ರೀಗಳವರು ವಿವರಿಸುತ್ತಿದ್ದಾರೆ.

( ಧವಲಕಂಬಲೇನ ಸನಾಥೀಕೃತಂ ಆಸ್ಥಾನಮಂಟಪಂ ಅಧಿರೂಢಃ ಶುಶ್ರೂಷಯಾ ಸಮಾಗತ್ಯ ಸೇವಮಾನಾನಾಂ ಸುಧಿಯಾಂ ಕೇನಚಿತ್ ಅತೀಸಮೀಪೋಪವಿಷ್ಟೇನ ಮಧುರ ಸ್ವನೇನ ವಿದುಷಾ ಶಿಷ್ಯೇಣ ಪಠ್ಯಮಾನಸ್ಯ ಮಹತೋ ಭಾಗವತಸಂಚಯಸ್ಯ ತತ್ವಭಾವಂ ಅರ್ಥತಾತ್ಪರ್ಯಂ ಬೋಧಯನ್ )

—ಸೋಮನಾಥವ ವ್ಯಾಸಯೋಗಿಚರಿತ.

---

# ಚರಿತ್ರೆ ಮತ್ತು ಶ್ರೀವ್ಯಾಸರಾಯರು

ಉಮಾ–ಶ್ರೀಧರಮೂರ್ತಿ

ಚರಿತ್ರೆಯಲ್ಲಿ 'ವಿಜಯನಗರ ಸಾಮ್ರಾಜ್ಯ. ಶ್ರೀಕೃಷ್ಣದೇವರಾಯನ ಆಡಳಿತ ಸುವರ್ಣಾಕ್ಷರಗಳಲ್ಲಿ ಬರೆಯಬೇಕು, ಎಂಬುದಾಗಿ ಅನೇಕ ಪತ್ರ ಪುಸ್ತಕಗಳಲ್ಲಿ ಬರೆಯಲಾಗಿದೆ. ಚರಿತ್ರೆಯಲ್ಲಿ ಮೊಗಲರ' ಆಳ್ವಿಕೆ. ಶಹಜಹಾನ್ ತನ್ನ ರಾಣಿ ಮಮತಾಜಳ ಅಮರ ಪ್ರೇಮದ ಕುರುಹಾಗಿ ತಾಜ್‌ಮಹಲ್ ಕಟ್ಟಿಸಿದ್ದು, ಬ್ರಿಟೀಷರ ಪ್ರಭುತ್ವ, ಯಾವತ್ತೂ ವಿಚಾರವನ್ನು ಚಾಚು ತಪ್ಪದೆ ವರ್ಣಿಸುತ್ತಾರೆ. ಆದರೆ ಶ್ರೀಕೃಷ್ಣದೇವರಾಯನ, ವಿಜಯನಗರದ ಪ್ರಸ್ತಾಪ ಬಂದಾಗ, ಇವೆಲ್ಲರ ಏಳಿಗೆಗೆ ಕಾರಣ ಕರ್ತರಾದ ಶ್ರೀವ್ಯಾಸರಾಯರ ಪ್ರಸ್ತಾಪವೇ ಇಲ್ಲ.

ಶ್ರೀವ್ಯಾಸರಾಜರು, ಕೃಷ್ಣದೇವರಾಯನ 'ರಾಜಗುರು' ಗಳು, ಅವನ ಸರ್ವತೋಮುಖ ಏಳಿಗೆಗೆ, ಧರ್ಮಶ್ರದ್ಧೆಗೆ ಕುಹುಯೋಗ ನಿವಾರಣೆಗೆ ಕಾರಣ ಕರ್ತರು. ಚರಿತ್ರೆಯಲ್ಲಿ ಯಾವ ಕಾಲದಲ್ಲೂ ಒಬ್ಬ ಯತಿಪುಂಗವ ಸಿಂಹಾಸನಾರೋಹಣ ಮಾಡಿದ ಸಂದರ್ಭವೇ ಇಲ್ಲ. ಶ್ರೀವ್ಯಾಸರಾಜರೊಬ್ಬರೆ ಕರ್ನಾಟಕ ರತ್ನ ಸಿಂಹಾಸನವನ್ನು ಕೆಲ ಘಳಿಗೆ ಆಳಿದವರು, ಹೀಗಿದ್ದರೂ, ಎಲ್ಲೂ ಇದರ ಪ್ರಸ್ತಾಪವೇ ಇಲ್ಲ. ಇಂತಹ ಸಮರ್ಥ ಗುರುಗಳು ಬಲು ಅಪರೂಪ.

ವಿದೇಶಿಯರಾದ ಫ್ರಾನ್ಸ್ ದೇಶದವರಿಂದ ಪ್ರಶಂಸಿಸಲ್ಪಟ್ಟು, ಅವರಿಂದ ಸುಲೋಚನ (ಕನ್ನಡಕ) ವನ್ನು ಕಾಣಿಕೆಯಾಗಿ ಪಡೆದವರು. ಇವರ ಮಹಿಮಾತಿಶಯಗಳು ಈ ಲೇಖನಿಗೆ ಮೀರಿದುದು. ಇಂತಹ ಮಹನೀಯರ ಪ್ರಸ್ತಾಪ ಯಾವ ಚರಿತ್ರೆ, ಕಡೆಗೆ ಕರ್ನಾಟಕದ ಚರಿತ್ರೆ ಪುಸ್ತಕದಲ್ಲೂ ಇಲ್ಲ. ಇದೆಂತಹ ವಿಪರ್ಯಾಸ ! ಎಂತಹ ಅನ್ಯಾಯ, ಪಕ್ಷಪಾತ ! ಮುಂಬರುವ ಚರಿತ್ರೆ ಪುಸ್ತಕದಲ್ಲಾದರು "ಶ್ರೀ ಚಂದ್ರಿಕಾಚಾರ್ಯರ" ಸ್ಮರಣೆ ತಪ್ಪದೇ ಮಾಡಿ ಯಥಾರ್ಥವನ್ನು ಬರೆಯಬೇಕು.

# ವ್ಯಾಸ-ವಾದಿರಾಜರ ಸಂಬಂಧ-ಸ್ವಾರಸ್ಯ

-ಶ್ರೀ ಹಯವದನ ಲೋಕೂರ, ಬೆಳಗಾವಿ.

ಮಧ್ವರ ಪೀಳಿಗೆಯ ಜಯತೀರ್ಥ ಶಿಷ್ಯ ವಿದ್ಯಾಧಿರಾಜರು ವೃಂದಾವನಸ್ಥರಾಗುವಾಗ ರಾಜೇಂದ್ರ ತೀರ್ಥರು ಸಂಚಾರದಲ್ಲಿದ್ದುದರಿಂದ ಕವೀಂದ್ರತೀರ್ಥರಿಗೆ ಪೀಠವಾಗಿ, ರಾಜೇಂದ್ರರ ಕವಲು ಸೋಸಲೆಯ ಮಠವೆನಿಸಿತು. ಈ ಮಠದಲ್ಲಿ ಶ್ರೀಪಾದರಾಜರ ದೊಡ್ಡಮ್ಮನ ಮಗ ಬ್ರಹ್ಮಣ್ಯತೀರ್ಥರೆನಿಸಿ. ಬನ್ನೂರಿನ ಬಲ್ಲಣ ಸುಮತಿಯನ್ನಾಶೀರ್ವದಿಸಲು ೩ನೆಯ ಮಗನಾಗಿ ಹುಟ್ಟಿದ ಯತಿರಾಜ (೧೪೪೭). ೨೦ರ ಪ್ರಾಯಕ್ಕೆ ದೀಕ್ಷೆ ವಹಿಸಿದಾಗ ವ್ಯಾಸರಾಯ ಎನಿಸಿ, ಮಠಕ್ಕೂ ಅದೇ ಹೆಸರಾಯಿತು. ಉತ್ತರ-ದಕ್ಷಿಣ ದಿಗ್ವಿಜಯಗಳಲ್ಲಿ ಮಿಥಿಲೆಯ ಪಕ್ಷಧರ ಮಿಶ್ರನನ್ನು ಗೆದ್ದು ಬಂದ ಅವರು, ಶ್ರೀಪಾದರಾಜರ ಮಳುಬಾಗಿಲ ವಿದ್ಯಾಕೇಂದ್ರದಲ್ಲಿ ಅಧ್ಯಯನಕ್ಕೆ ನಿಂತರು (೧೪೭೫). ಅವರಾಜ್ಞೆಯಂತೆ ರಾಜಗುರುವಾಗಲೊಪ್ಪಿ ಸಾಳ್ವ ನರಸಿಂಹನ ಚಂದ್ರಗಿರಿಗೈದಿ, ಅವನ ಸೇನೆಯೊಡನೆ ಶ್ರೀರಂಗ ಉಡುಪಿಗಳತ್ತ ಯಾತ್ರೆ ಹೋಗಿ ಬಂದರು (೧೪೭೭-೮೧). ಬಳಿಕ ಸಾಳ್ವ ಹತ ಅರ್ಚಕನ ಮಗ ಬೆಳೆಯುವ ತನಕ ಬಂದು ತಿರುಪತಿಯ ಶ್ರೀನಿವಾಸನನ್ನು ಪೂಜಿಸಿಕೊಂಡಿದ್ದರು (೧೪೮೬-೯೮). ಮರುವರ್ಷ ಸಾಳವ ನರಸನಾಯಕನ ವಿಜಯನಗರಕ್ಕೆ ತೆರಳಿ ಚಿನ್ನದ ಪಲ್ಲಕ್ಕಿಯ ಸ್ವಾಗತ ಪಡೆದರು. ಇದೇ ಸುಮಾರಿಗೆ ಯಂತ್ರೋದ್ಧಾರಾದಿ ೭೩೨ ಪ್ರಾಣಪ್ರತಿಷ್ಠೆಗೈದು, ವಿಜಯ ವಿಠಲನೆಡೆ ಸ್ಥಾಪಿಸಿದ 'ಸರಸ್ವತೀ ವಿದ್ಯಾಪೀಠ' ಕ್ಕೆ ಕುಲಪತಿಯಾದರು. ಅದರ ಬಾಗಿಲಲ್ಲಿ ಆಗಿನ ಯುವರಾಜ ಕೃಷ್ಣದೇವರಾಯನೂ ಅಪ್ಪಣೆ ಕೇಳಬೇಕಿತ್ತು. ಅಂಥ ವಿದ್ಯಾನಗರಕ್ಕೆ ಅಧ್ಯಯನಾರ್ಥ ಬಂದವರಲ್ಲಿ ರಘುನಾಥ - ಜಿತಾಮಿತ್ರ - ವಿಜಯೀಂದ್ರತೀರ್ಥರು, ನಾರಾಯಣಯತಿ, ಬಂಗಾಲದ ಲಕ್ಷ್ಮೀತೀರ್ಥ ಮೊದಲಾದವರು ಮುಖ್ಯರು.

೧೫೦೯ರಲ್ಲಿ ಕೃಷ್ಣದೇವರಾಯ ಪಟ್ಟವೇರಿ, ರಾಜಗುರುಗಳಿಗೆ ರತ್ನಾಭಿಷೇಕ ನಡೆಸಿದ. ೧೫೧೪ರಲ್ಲಿ ಕಳಿಂಗದ ಉದಯಗಿರಿಯಿಂದ ಕೃಷ್ಣನ ಪ್ರತಿಮೆಯನ್ನು ತಂದು ಹೇಮಕೂಟದಲ್ಲಿ ಸ್ಥಾಪಿಸಿದಾಗ, ವ್ಯಾಸರಾಜರು ಶ್ರೀಕೃಷ್ಣನನ್ನು ವರ್ಣಿಸಿದ್ದು -

ಧರೆಗಧಿಕವೆಂದೆನಿಪ ವಿದ್ಯಾನಗರ ಒಳಿತೆಂದು ಉದ್ದ

ಅಂದು ಹೀಗೆ ಪೂಜಿತನಾದ ಈ ಕೃಷ್ಣಮೂರ್ತಿ ಮದ್ರಾಸ್ ವಸ್ತುಸಂಗ್ರಹಾಲಯ ಸೇರಿದ್ದಾನೆ ಇಂದು !

ಸುಮಾರು ೧೫೧೫ರ ವೇಳೆಗೆ ಕೃಷ್ಣದೇವರಾಯನ ಆಳ್ವಿಕೆಯೂ ವ್ಯಾಸರಾಜರ ವಿಶ್ವವಿದ್ಯಾಲಯದ ಸ್ಥಿತಿಯೂ ಅತ್ಯುನ್ನತವಾಗಿರಬೇಕು. ಆಗಲೇ ವಾದಿರಾಜರೂ ಪುರಂದರದಾಸರೂ ಹಂಪೆಗೆ ಬಂದಂತಿದೆ. ವ್ಯಾಸರಾಜರೂ ಹಲವು ಸಲ ಉಡುಪಿಗೆ ಹೋಗಿದ್ದರು. ೧೫೮೦ರ ವೇಳೆಗೆ ಸೇನೆಯೊಡನೆ ಹೋದಾಗಲೇ ಮಧ್ವವಾಟ ಮಠಕ್ಕೆ ಹೋಗಿ ಮಧ್ವಾರ್ಜಿತ ವ್ಯಾಸಮುಷ್ಟಿಯನ್ನು ಕಾಣಿಕೆ ಪಡೆದು ಬಂದಂತೆ ಬಿ. ವೆಂಕೋಬರಾಯರು ' ವ್ಯಾಸಯೋಗಿ ಚರಿತ'ದ ಪೀಠಿಕೆಯಲ್ಲಿ ಸೂಚಿಸಿದ್ದಾರೆ, ( ವಾಕ್ಯ ೯೬-೧೦೫ ), ಆದರೆ ೧೬೪೫ರಲ್ಲೇ ರಚಿತವಾದ ರಾಮಚಂದ್ರಾಚಾರ್ಯರ ' ವಾದಿರಾಜಗುರು ಚರಿತಾಮೃತ ' ಇನ್ನೆಯ ಬಿಂದು ಸೂಚಿಸುವಂತೆ, ವ್ಯಾಸಮುಷ್ಟಿಯ ಅರ್ಚನೋತ್ಸುಕರಾಗಿ ವ್ಯಾಸರಾಜರು ಅದನ್ನು ಕೊಂಡೊಯ್ದರು–

---

## 'ವ್ಯಾಸತೀರ್ಥರು ' ರಾಯ ' ರಾದರು'

ಕುಹುಯೋಗ ನಿಮಿತ್ತ ವ್ಯಾಸತೀರ್ಥರಿಗೆ ಸಿಂಹಾಸನಾಧಿಕಾರವನ್ನು ಸ್ವೀಕರಿಸಲು ರಾಜನು ವಿನಂತಿಸಿದಾಗ ಸ್ವಾಮಿಗಳು ಮುಗುಳ್ನಕ್ಕು ಹೀಗೆಂದರು, ಏಕಾದಶಸ್ಥೇ ಗೋವಿಂದೇ ಸರ್ವೇಪ್ಯೇಕಾದಶೇಸ್ಥಿತಾಃ । ಕಿಂ ಕುರ್ವಂತಿಗ್ರಹಾಃ ಸರ್ವೇ ಶನ್ಯರ್ಕಾಂಗಾರಕಾದಯಃ ॥ "ಶ್ರೀಹರಿಯು ಏಕಾದಶ ಇಂದ್ರಿಯಗಳಲ್ಲಿರುವಾಗ ಅವುಗಳಿಂದ ಸ್ಮರಿಸಲ್ಪಟ್ಟಾಗ–ಅವನ ಅಧೀನರಾದ ಎಲ್ಲಾ ಗ್ರಹಗಳೂ ಏಕಾದಶಸ್ಥಾನದಲ್ಲೇ ಇದ್ದು ಶುಭಕರಗಳಾಗುತ್ತವೆ, ಹೆದರಬೇಡ. ಸಮಯ ಬಂದಾಗ ನೋಡೋಣ ".

ಆದರಂತೆ ಕುಹುಯೋಗದ ದಿನ ಮೂರೂ ಮುಕ್ಕಾಲುಗಳಿಗೆ ಅಂದರೆ ಒಂದೂವರೆ ಗಂಟೆ ಸಿಂಹಾಸನದಲ್ಲಿ ಆಸೀನರಾಗಿದ್ದು ಕೃಷ್ಣದೇವರಾಯನಿಗೆ ಬರಬೇಕಾಗಿದ್ದ ವಿಪತ್ತನ್ನು ಪರಿಹರಿಸಿದರು.

ತತ್ಸಿಂಹಾಸನ ಮಾರುಹತ್ ಪ್ರಚುರಭೂದಾನಾದಿ ಸಂಸಾಧಯನ್.
ತದ್ರಾಜ್ಯಂ ಪುನರರ್ಪಯತ್ ಕ್ಷಿತಿಭುಜೇ ಕೃಷ್ಣಾಭಿಧಾನಾಯಸಃ ।
ತತ್ಸಂವತ್ಸರಗಾಂತ್ಯಮಾಸಿ ಧವಳೇ ಪಕ್ಷೇ, ಹರೇ ರ್ವ್ಯಾಸರೇಪ್ಯಂತೇ
ವ್ಯಾಸಸಮುದ್ರನಾಮಕಮದಾದ್ಗ್ರಾಮಂ ಸಚಾಸ್ಮೈನೃಪಃ ॥

—ವಿದ್ಯಾರತ್ನಾಕರರು.

ಪುರಂದರದಾಸರು— ದೇಶಾಧಿಪನಿಗೆ ಬಂದ ಕುಹುಯೋಗವ ನೂಕಿಸಿ,
ಸಿಂಹಾಸನವನ್ನೇರಿ ಮೆರೆದೆ

---

ಪ್ರೂಜಯನ್ನರ್ಚನೋತ್ಕೋಸೌ ವ್ಯಾಸಮುಚ್ಚಿಂ ನಿನಾಯ ಹಿ ॥೪॥

ವಿನೋದಪೂರ್ವಕವಾದ ಈ ಅಪಹಾರಲೀಲೆ ಬೇಕೆಂದೇ ನಡೆದಂತಿದೆ ೧೫೦೦ರ ನಂತರ. '೧೫೦೦ರಲ್ಲಿ ದಕ್ಷಿಣ ಕನ್ನಡದಲ್ಲೆಲ್ಲ ಸಂಚರಿಸಿ, ಪ್ರಾಣದೇವರ ವಿಗ್ರಹ ಪ್ರತಿಷ್ಠಾಪಿಸಿದರು' (ವ್ಯಾಸರಾಜರು) ಎಂಬ ಹೇಳಿಕೆಯಂತೆ (ಎಚ್. ಕೆ. ವೇದವ್ಯಾಸಾಚಾರ್, ಕರ್ನಾಟಕದ ಹರಿದಾಸರು, ಪುಟ. ೨೫೯) ಈ ಘಟನೆಯ ಗಡುವನ್ನಿರಿಸಿಕೊಂಡರೆ, ಆಗ ವಾದಿರಾಜರು ಸಂಚಾರದಲ್ಲಿದ್ದಂಶಕ್ಕೆ ಸರಿ ಹೋಗುತ್ತದೆ.

ಇತಿ ದೇಶಾಂತರಸ್ಥಸ್ಯ ಬೋಧಿತೋ ವಾದಿರಾಟ್ ಕೃತೀ
ವ್ಯಾಸಂಗ ವ್ಯಾಜಮಾಸಾದ್ಯ ವ್ಯಾಸಾರ್ಯಂ ಸಮುಪಾಗತಃ ॥೨೦॥

ಹೀಗೆ ವ್ಯಾಸಂಗ ವ್ಯಾಜದಲ್ಲಿ ವಾದಿರಾಜರು ಹಂಪೆಗೆ ಬಂದಾಗ ವರ್ಣಿಸಿದರು—

ರಾಜಧಾನೀ ಜಯತಿ ಸಾ ಗಜಗಹ್ವರ ಸಂಜ್ಞಿತಾ
ಯತ್ರ ಭಾಂತಿ ಗಜಾ ಮಧ್ವರಾದ್ಧಾಂತ ಧರಣೀಧರಾಃ
॥ ತೀರ್ಥ ಪ್ರಬಂಧ, ಪೂರ್ವ ॥

ಗಜಗಹ್ವರವೆಂದರೆ ಆನೆಗೊಂದಿ; ಅಲ್ಲಿ ಮಧ್ವಸಿದ್ಧಾಂತ ಧರಣೀಧರ ಗಜಗಳಿದ್ದುವೆಂಬುದು ವ್ಯಾಸರಾಜರನ್ನು ಕುರಿತ ನುಡಿ. ಅವರ ಕನ್ನಡ ಕೀರ್ತನೆಯೂ ಇಲ್ಲಿ ಪೋಷಕ—

ಆನೆಬರುತ್ತಿದಿಕೊ ದಾಸರ ಮರಿ
ಯಾನೆ ಬರುತ್ತಿದಿಕೋ ಪ.

ಮರುತಮತ ನಿರಂತರ ಚರಣದ ಧೂಳಿ
ಕರದಲಿ ಪಿಡಿದು ಶಿರದಲಿ ಮೇಲೆ ಚೆಲ್ಲುತ್ತ ೧

ಮಧ್ವಮುನೀಂದ್ರರ ಶುದ್ಧ ತೀರ್ಥದಿ ಮಿಂದು
ತಿದ್ದಿದ ನಾಮ ಶ್ರೀಮುದ್ರೆ ಶೃಂಗಾರದಿ ೪

ಮುರಿಯಲು ದುರುಳನ ಗರ್ವವನೆ ಮುನ್ನ
ಸಿರಿಹಯವದನನ ಅರಮನೆ ಪಟ್ಟದ ೫

'ವಾದಿರಾಜರ ಕೃತಿಗಳು' ಟಿಪ್ಪಣಿಸಿದಂತೆ ಇದರ ಅನ್ವಯ ವಾಗೀಶರಿಗೋ ವ್ಯಾಸರಾಜರಿಗೋ ಎಂದನುಮಾನಿಸಬೇಕಿಲ್ಲ. ವಾಗೀಶರು ವ್ಯಾಸರಾಜರಂತೆ ದಾಸರ ಮರಿಯಾನೆ- ವಾದಿಗಳಾಗಿರಲಿಲ್ಲ, ಅಲ್ಲದೆ ವಿಜಯೀಂದ್ರ ರಚಿತವೆಂಬ ' ವ್ಯಾಸರಾಯ ವಿಚಿತ್ರ ಮೇಘ ಬಂತಿದಿಕೋ ' ಎನ್ನುವ ರೂಪಕ ಕೃತಿಯೊಂದು ಇದರಂತೆಯೆ ಇರುವುದನ್ನು ಗಮನಿಸಬಹುದು ( ಕರ್ನಾಟಕದ ಹರಿದಾಸರು, ಪು. ೨೬೭ ). ವೇಣು

ಗೋಪಾಲದಾಸರೆಂದಂತೆ 'ಚಂದ್ರಿಕಾಚಾರ್ಯರ ಶಿಷ್ಯರಂದದಿ ಚರಿಸಿ'ದ ವಾದಿರಾಜರು ಒಮ್ಮೆ ವ್ಯಾಸರಾಜರು ನಿರ್ಮಾಲ್ಯಪೂಜೆಯೊಪ್ಪಿಸಿದಾಗ ವ್ಯಾಸಮುಷ್ಟಿಯನ್ನಪಹರಿಸಿ ಕೊಂಡೊಯ್ದರು. ಅಂತೆಯೆ ಗುರುಗಳು ವಿನೋದದಿಂದ 'ನಾವು ತಂದಂತೆ ಅವರೂ ಒಯ್ದರು, ಇದರಲ್ಲೇನೂ ತಪ್ಪಿಲ್ಲ. ಇಷ್ಟು ದಿನ ಆ ವ್ಯಾಸ ಪೂಜೆಯ ಪುಣ್ಯ ನಮಗೊದಗಿದ್ದೇ ಸಾಕು ' ಎಂದರು.

೧೫೨೧ರಲ್ಲಿ ರಾಜನಿಗೆ ಕುಹುಯೋಗ ( ಅಮಾವಾಸ್ಯೆಯಂದು ಜನ್ಮ ನಕ್ಷತ್ರಕ್ಕೆ ರವಿ ಮಂಗಳ ಗುರು ಶನಿ ೧೨ನೆಯ ಗೃಹದಲ್ಲಿ ಸಂದಿಸುವ ದುರ್ಯೋಗ) ಒದಗಲು ವ್ಯಾಸರಾಜರೇ ' ಕರ್ನಾಟಕ ಸಿಂಹಾಸನಗತ ಪ್ರಭು ' ಎನಿಸಿ 'ರಾಜ್ಯ, ವೇದಾಂತ ಸಾಮ್ರಾಜ್ಯ ಒಟ್ಟಿಗೇ ಆಳಿದರು ' ( ಕೆ. ಎಂ. ಕೃಷ್ಣರಾವ್, ಜಗನ್ನಾಥದಾಸರು, ೯೪ ) 'ದೇಶಾಧಿಪಗೆ ಬಂದ ಕುಹುಯೋಗವನು ನೂಕಿ ನೀ ಸಿಂಹಾಸನವೇರಿ ಮೆರೆದೆ ' ಎಂದ ಪುರಂದರದಾಸರು, ಇದಕ್ಕೆ ಮೊದಲೇ ದಾಸದೀಕ್ಷೆ ವಹಿಸಿರಬೇಕು. ಅದೇ ವ್ಯಾಸರಾಯ ಸುಳಾದಿಯಲ್ಲಿವರು 'ಧರೆಯೊಳು ವಿಜಯೀಂದ್ರ ವಾದಿರಾಜ ರೆಂಬ ಪರಮಶಿಷ್ಯರ ಪಡೆದು ಮೆರೆದೆ ' ಎಂದಿರುವುದರಿಂದ, ಈ ಸಂಗತಿಗಳನ್ನು ಕುಹುಯೋಗ ಪೂರ್ವಕಾಲದುವೆನ್ನಬೇಕು. ವ್ಯಾಸರಾಯರು 'ನಿನ್ನ ನೋಡಿ ಧನ್ಯ ನಾದೆನೋ ಹೇ ಶ್ರೀನಿವಾಸ ' ಎಂದು ಹಾಡಿದ್ದು ಕುಹುಯೋಗ ನಿವಾರಣಾರ್ಥ ತಿರುಪತಿಯಲ್ಲಿದ್ದು ಪ್ರಾರ್ಥಿಸಿದಾಗ. ೧೫೨೫ರಲ್ಲಿ ರಾಜನಿತ್ತ ವ್ಯಾಸಸಮುದ್ರದಲ್ಲಿ ಅಬ್ಧಿಯನು ಕಟ್ಟಿಸಿ, ರಾಜಕುಮಾರ ತಿರುಮಲ –ಮಂತ್ರಿ ಅಪ್ಪಾಜಿ (ತಿಮ್ಮರಸ) ತೀರಲು, ವಿದ್ಯಾಪೀಠದೊಡನೆ ಅತ್ತಲೇ ಸರಿದರು. ಆಗಲೇ ಕನಕದಾಸರೂ ಬಂದು ವ್ಯಾಸರಾಜರನ್ನು ಕೂಡಿದಂತಿದೆ. ೧೫೨೬ರಲ್ಲಿ ಆ ಗ್ರಾಮಭೂಮಿ ಪುರಂದರದಾಸಾ ತ್ಮಜಾದಿಗಳಿಗೆ ದಾನವಾದ ಉಲ್ಲೇಖ ಕಮಲಾಪುರ ತಾಮ್ರ ಶಾಸನದ್ದು.

---

### ಚೈತನ್ಯ ಸಂಪ್ರದಾಯಸ್ಥರ ಮಠ ವ್ಯಾಸರಾಜ ಮಠ

ವ್ಯಾಸರಾಜ ಮಠದ ಗುರುಗಳು ಜಯಧ್ವಜರು ( 10ನೇ ತಲೆ ) ಇವರು ಬಂಗಾಳ ದಲ್ಲಿ ಭಕ್ತಿಪಂಥವನ್ನು ಆರಂಭಿಸಿದರು. ಚೈತನ್ಯ ಪಂಥದ ಗುರುಗಳಾದ ವಿಷ್ಣುಪುರಿ ಎಂಬವರು ಜಯಧ್ವಜರ ಶಿಷ್ಯರು. ಜಯಧ್ವಜರು ಭಕ್ತಿರತ್ನಾವಳಿ ಎಂಬ ಗ್ರಂಥವನ್ನು ಬರೆದಿದ್ದರೆ ವಿಷ್ಣುಪುರಿಯವರು ಭಕ್ತಿರತ್ನಾಕರ ಎಂಬ ಗ್ರಂಥವನ್ನು ಬರೆದರು.

ವ್ಯಾಸರಾಯರು ವಂಗದೇಶಕ್ಕೆ ಹೋದಾಗ ಈ ಚೈತನ್ಯ ಪಂಥಕ್ಕೆ ಮತ್ತಷ್ಟು ಉತ್ತೇಜನ ದೊರೆಯಿತು. ಹೀಗೆ ಚೈತನ್ಯ ಪಂಥದ ಶಿಷ್ಯರಿಗೆ ವ್ಯಾಸರಾಜ ಮಠ ಗುರು ಮಠವೆನಿಸಿದೆ.

ಬಂಗಾಳದಲ್ಲಿ ಚೈತನ್ಯ ಸಂಪ್ರದಾಯದ ಗುರುಗಳಾದ ಲಕ್ಷ್ಮೀತೀರ್ಥರಿಗೆ ಇವರೇ ಆಶ್ರಮವಿತ್ತಿದ್ದಾರೆಂದು ಪ್ರತೀತಿಯಿದೆ.

---

ಕೃಷ್ಣ - ಅಚ್ಯುತದೇವರಾಯರ ಕಾಲದಲ್ಲಿನ್ನೊಮ್ಮೆ ವಾದಿರಾಜರು ಹಂಪೆಗೆ ಹೋಗಿದ್ದರೆಂಬ 'ವಾದಿರಾಜಗುರು ಚರಿತಾಮೃತ'ದ ನುಡಿಯಿಂದ (೨, ೨೫) ೧೫೨೯ರ ಕಾಲವನ್ನೂಹಿಸಬೇಕಿದೆ. ಅರಸರ ಆರ್ಥಿಕ ಸಂಕಷ್ಟ ಪರಿಹಾರಕ್ಕೆ ವಾಲೀ ಭಂಡಾವನ್ನೊಡೆದು ಕೊಟ್ಟು. ಪರ್ಯಾಯಕ್ಕಾಹ್ವಾನಿಸಿದರು. ೧೫೨೯ರಲ್ಲಿ ಶ್ರೀಕೃಷ್ಣ ದೇವರಾಯ ತೀರಿ, ೧೫೩೨-೩೩ರ ಮಧ್ಯೆ ಅಚ್ಯುತರಾಯ-ವ್ಯಾಸರಾಜರು ಉಡುಪಿ ಗೈದಿ ಕೃಷ್ಣ ಮಠಾಧಿಗಳ ಜೀರ್ಣೋದ್ಧಾರ ನಡೆಸಿಕೊಟ್ಟುದ್ದಕ್ಕೆ ಅಲ್ಲಿಯ ದ್ವಾರಸ್ಥ ಶಾಸನವಿದೆ. ಮತ್ತೆರಡು ವರ್ಷಗಳಲ್ಲಿ ಅಚ್ಯುತರಾಯನ ರೋಗವಾರ್ತೆ ಕೇಳಿ ಬಂದ ವಾದಿರಾಜರು ತೀರ್ಥಮಾತ್ರದಿಂದ ಗುಣಪಡಿಸಿ, ಸಿಂಹಾಸನ- ಛತ್ರಚಾಮರ- ಮುತ್ತಿನ ಗದ್ದುಗೆ- ಕಿರೀಟಗಳ ಮರ್ಯಾದೆ ಹೊಂದಿದರು. 'ಅವನ್ನಿಂದಿಗೂ ವಾದಿರಾಜರ ಪುಣ್ಯದಿನದಂದು ಪೂಜಿಸುವರು' (ವಾದಿರಾಜಗುರು ಚರಿತಾಮೃತ, ೨-೪೪) ಅರಸಪ್ಪನಾಯಕನಿತ್ತ ವಸ್ತುಗಳ ಬಗೆಗೂ ಇಂಥದೇ ನುಡಿ (೬-೩೦) ಇದ್ದರೂ, ವ್ಯಾಸರಾಯರು–

ವಾದಿಗಳೆಲ್ಲರನೆ ಗೆದ್ದ ವಾದಧೀರನೆ ಪ.
ವಾದಿರಾಜ ಗುರುರಾಯ ಸಾಧುಪ್ರಿಯಗೇಯ ಕಾಯ ಅ. ಪ,
ಹತ್ತಿದೆ ಮುತ್ತಿನ ಗದ್ದಿಗೆಯನ್ನು ೧
ನಿನಗೆ ಎಣೆಗಾಣೆ ನವ
ದಿನಪ ತೇಜ ಮಧ್ವಮುನಿಯ
ಮನದೊಡೆಯ ಶ್ರೀಕೃಷ್ಣನ
ನೆನೆದ ತನುವನಲ್ಲವೇ ೩

ಎಂದಿರುವ ನುಡಿಗಳಿಂದ ಈ ವಸ್ತುಗಳು ಅಚ್ಯುತರಾಯನಿತ್ತುವೇ ಆಗಿರುವುದು ಸಾಧ್ಯ. ಶ್ರೀಪಾದರಾಜರು 'ಶೇಷನೆ ಕೊಂಡಾಡಬೇಕು ವ್ಯಾಸಮುನಿರಾಯರ' ಎಂದಂತೆ, ವ್ಯಾಸರಾಜರೂ ವಾದಿರಾಜರನ್ನು ಕೊಂಡಾಡಿದ್ದಿಲ್ಲಿ ವಿಶೇಷ, ಗಮನಾರ್ಹ ! 'ಶಿಷ್ಯಾದಿಚ್ಛೇತ್ ಪರಾಜಯಂ' ಎಂಬಂತೆ ಪುರಂದರದಾಸರೂ ಅವರ ಸಾಹಿತ್ಯವೂ ವ್ಯಾಸರಾಜರಿಂದ ಪ್ರಶಸ್ತಿ ಪಡೆದಿವೆಯಲ್ಲವೇ ?

೧೫೩೫ರಲ್ಲಿ ಸೋಮನಾಥ ಕವಿ ರಚಿಸಿದ 'ವ್ಯಾಸಯೋಗಿ ಚರಿತ' ಕೇಳಿ ವ್ಯಾಸರಾಜರು ತಲೆದೂಗಿದ್ದು ಕವಿಗೆ ಬಹು ದೊಡ್ಡ ಬಹುಮಾನವೆನಿಸಿತು. ಅಂಥ ಘನವ್ಯಕ್ತಿ ಪಂಡಿತರಿಗೆ 'ಚಂದ್ರಿಕಾ'ದಿ ಗ್ರಂಥ ರಚಿಸಿ ವ್ಯಾಸಕೂಟವನ್ನು, ಪಾಮರರಿಗೆ ಕನ್ನಡ ಕೃತಿ ರಚಿಸಿ ದಾಸಕೂಟವನ್ನು ಪೋಷಿಸಿದ್ದು ಮಹತ್ತರ ಸಂಗತಿ. ೧೪೭೫ರಷ್ಟು ಹಿಂದೆ 'ಹರಿಯೇ ಕುಣಿ ಎಂದು ಕುಣಿಸಿದರಯ್ಯ (ಕೃಷ್ಣನನ್ನು, ತಾಳದಂತೆ ಶಾಲಿಗ್ರಾಮ ಬಾರಿಸುತ್ತ) -ಅಂದಿನಿಂದಲೇ 'ಶ್ರೀಕೃಷ್ಣ' ಅವರ ಅಂಕಿತವೆನಿಸಿ, ಕನ್ನಡ ಕೀರ್ತನೆಗಳಿಂದ ಹರಿದಾಸ ವಾಙ್ಮಯ ವಿಜೃಂಭಿಸಿತು. ೧೫೩೯ರಲ್ಲಿ

ವ್ಯಾಸರಾಜರು ನವವೃಂದಾವನದಲ್ಲಿ ಕೀರ್ತಿಕಾಯರಾದರೂ, ವಾದಿರಾಜ -ಪುರಂದರ ಕನಕದಾಸರಿಂದ ವ್ಯಾಸ -ದಾಸಕೂಟ ಮುಂಬರಿದು ದಾಸಸಾಹಿತ್ಯವು ಸುವರ್ಣಯುಗ ಸೃಷ್ಟಿಸಿತು.

ಅಂತೆಯೇ, ವಾದಿರಾಜರು ನಂತರ ದಶಮಸ್ಕಂಧ ಭಾಗವತ ಕನ್ನಡಿಸುವ 'ಶ್ರೀಕೃಷ್ಣ ಬಾಲಲೀಲೆಯಲ್ಲಿ ವ್ಯಾಸರಾಯರನ್ನಿಂತು ನುಡಿದರು–

ಸಕಲ ವಿದ್ವತ್ ಪ್ರೌಢರಾದ ಸುಖತೀರ್ಥರ ಮತವ
ಪ್ರಕಟಿಸಿದ ವ್ಯಾಸ ಮುನಿಯ ಚರಣಗೆರಗುವೆ ॥ ಪೂರ್ವಾರ್ಧ, ೩ ॥

( ವಾದಿರಾಜರ ಕನ್ನಡ ಕೃತಿಗಳಲ್ಲೇ ಗುಣಗಾತ್ರಗಳಲ್ಲಿ ಹಿರಿದಾದ ಈ ಕೃತಿ ಮಾತ್ರ ಪ್ರಕಟಗೊಂಡೂ ಎಲ್ಲ ವಿದ್ವಾಂಸರ ಕಣ್ತಪ್ಪಿಸಿಕೊಂಡುದು ಅತ್ಯಂತ ಅಚ್ಚರಿ ! ) "ವಾದಿರಾಜರು ವ್ಯಾಸರಾಯರನ್ನು ತಮ್ಮ ಗುರುಗಳೆಂದು ತಾವು ಯಾವ ಗ್ರಂಥ ದಲ್ಲಿಯೂ ಸ್ಮರಿಸಿಲ್ಲ" ( ಎನ್. ಕೆ. ನರಸಿಂಹಮೂರ್ತಿ, ಮಧ್ವಮತ ಪ್ರಸಾರ, ೧೬೪ ), "ವಾದಿರಾಜ ವಿರಚಿತ ಶ್ರೀಪಾದರಾಜಾಷ್ಟಕದಲ್ಲಿ 'ಶ್ರೀವ್ಯಾಸರಾಜಯತಿ ಶಿಷ್ಯಗಣರ್ಷಭೇಣ ಶ್ರೀವಾದಿರಾಜ ಯತಿನಾ ರಚಿತಂ' (೭) ಎಂಬ ಉಕ್ತಿಯೂ ಬರುತ್ತದೆ" ( ಜಿ. ವರದರಾಜರಾವ್, ವಾದಿರಾಜರ ಕೃತಿಗಳು, ಪೀಠಿಕೆ ।। )– ಈ ಪರಸ್ಪರ ವಿರುದ್ಧ ಹೇಳಿಕೆಗಳ ನಡುವನ ಸುವರ್ಣರೇಖೆಯಂತೆ ಮಿಂಚಿದೆ, ವ್ಯಾಸ-ವಾದಿಸಾಜರ ಸುಮಧುರ ಸಂಬಂಧ ! ಅದೇ ಅವರಿಬ್ಬರ ಬಹಿರಂಗಜೀವನ ನಾಟಕದ ಸಾಮರಸ್ಯ. ಅಂತರಂಗ ಸ್ವರೂಪದ ಸ್ವಾರಸ್ಯ ;

---

## ಪ್ರಾದುರ್ಭಾವ – ಅದರ್ಶನ

ವಿದ್ಯಾರತ್ನಾಕರ ತೀರ್ಥರ ಹೇಳಿಕೆಯಂತೆ–

ಬ್ರಹ್ಮಣ್ಯಸ್ಯ ಯತೀಶಿತುಃ ಕರುಣಯಾ ಸಂವತ್ಸರೇಷ್ವಾದಿಮೇ ।
ವೈಶಾಖಾದಿಮ ಪಕ್ಷಕೇ ದಿನ ಮಣೇರ್ವಾರೇ ದಿನೇ ಸಪ್ತಮೇ ॥

ಪ್ರಭವ ಸಂವತ್ಸರದ ವೈಶಾಖ ಶುದ್ಧ ಸಪ್ತಮಿ, ಭಾನುವಾರ ಅಂದರೆ 22-4-1447 ಕ್ರಿ. ಶ. ವ್ಯಾಸತೀರ್ಥರ ಜನನ.

ಪುರಂದರರ ವಚನದಂತೆ__

'ವಿಳಂಬಿ ಸಂವತ್ಸರದಲ್ಲಿ ವಿಜಯನಗರದಲ್ಲಿ ಪಾಲ್ಗುನ ಬಹುಳ ಚೌವುತಿಯಲ್ಲಿ ಸ್ಥಿರವಾರ ದಲ್ಲಿ' ಶನಿವಾರ 8-3-1539 ಕ್ರಿ. ಶ. ನವ ವೃಂದಾವನದಲ್ಲಿ ಅದರ್ಶನ.

---

# ಶ್ರೀವ್ಯಾಸರಾಜರು ತೋರಿದ ಲೋಕನೀತಿ

-ಶ್ರೀಮತಿ ರಾಜಲಕ್ಷ್ಮಿ ಪಾರ್ಥಸಾರಥಿ

ಇಂದಿನ ಆಧುನಿಕ ಪರಿಸರದಲ್ಲಿ ನಾವು ಕೇಳುತ್ತಿರುವ, ಸತ್ಯ, ಧರ್ಮ, ಅಹಿಂಸೆ, ಪರಮತ ಸಹಿಷ್ಣುತೆ, ಕೋಮಲ ಸಾಮರಸ್ಯ ಮುಂತಾದ ವಿಶ್ವ ಮಾನವ ಧರ್ಮಗಳೆಂದು ಕರೆಯಸಿಕೊಳ್ಳಲ್ಪಡುವ ಅನೇಕ ಪ್ರಕಾರಗಳನ್ನು, ತಮ್ಮ ಕಾಲ ದಲ್ಲಿಯೇ ಪ್ರತಿಪಾದಿಸಿ, ಅಂದಿನ ಸಮಾಜದ ಆರೋಗ್ಯಕರ ವಾತಾವರಣಕ್ಕೆ ಕಾರಣ ಪುರುಷರಾದವರು ಶ್ರೀವ್ಯಾಸರಾಜರು. ಲೋಕ ಹಿತಕ್ಕೆ ಮಾರಕನಾಗಿ ಸಿಂಹಾಸನಕ್ಕೆ ಅನರ್ಹನಾದ ವೀರ ನರಸಿಂಹನ ಕುಟಿಲೋಪಾಯವನ್ನು ಅರಿತ ಶ್ರೀವ್ಯಾಸರಾಜರು, ಚಾಣಾಕ್ಷ ಮಂತ್ರಿ ತಿಮ್ಮರಸುವಿಗೆ ಸಹಕಾರ ನೀಡಿ ಶ್ರೀ ಕೃಷ್ಣದೇವರಾಯನನ್ನು ರಕ್ಷಿಸಿ ಸಾಮ್ರಾಟನಾಗಲು ಅನುಗ್ರಹಿಸಿದವರು. ಈ ತಮ್ಮ ನಡವಳಿಕೆಯಿಂದ ಅಪ್ರಿಯವಾದ, ಲೋಕ ಹಿತಕ್ಕೆ ಮಾರಕವಾದ ಸತ್ಯಕ್ಕೆ ಬೆಲೆಯಿಲ್ಲ ಎಂಬುದನ್ನು ಅವರು ಜಗತ್ತಿಗೆ ಸಾರಿದ್ದಾರೆ.

ಇನ್ನು ಅಹಿಂಸೆಯು ವಿಶಾಲ ಅರ್ಥವನ್ನು ಪಡೆದಿರುವುದು ಶ್ರೀವ್ಯಾಸರಾಜರ ಕಾಲದಲ್ಲಿಯೇ. ಅತ್ಯಗತ್ಯವಾದ ಸಮಯಗಳಲ್ಲಿ ಶತ್ರು ನಿಗ್ರಹದ ಮೂಲಕ ಆತ್ಮ ಸಂರಕ್ಷಣೆಯೂ ಅಹಿಂಸಾ ತತ್ವಕ್ಕೆ ವಿರೋಧವಲ್ಲವೆಂದೂ, ಅಪರಾಧಿಗಳಿಗೆ ಅವರ ಅಪರಾಧಗಳಿಗೆ ತಕ್ಕ ಶಿಕ್ಷೆ ಅಗತ್ಯವೆಂದೂ, ಬಿಗಿಯಾದ ಕಾನೂನು ಪಾಲಿಕೆ ವ್ಯವಸ್ಥಿತ ಸಾಮ್ರಾಜ್ಯಕ್ಕೆ ಭದ್ರ ಬುನಾದಿಯೆಂದೂ ವ್ಯವಹರಿಸುತ್ತಿದ್ದ ಶ್ರೀಕೃಷ್ಣದೇವರಾಯನ ಕಾರ್ಯಗಳಿಗೆ ಒತ್ತುಕೊಟ್ಟು ಶ್ರೀವ್ಯಾಸರಾಜರು ಅನುಗ್ರಹಿಸುತ್ತಿದ್ದುದು, ಮೇಲಿನ ಭಾವನೆಗಳು ಸರಿಯಾದುವೆಂಬುದನ್ನು ಸೂಚಿಸುತ್ತವೆ. ಇದು ಪ್ರಖ್ಯಾತ ವಿದೇಶೀ ಪ್ರವಾಸಿಯಾದ ಡಾಮಿಂಗೋ ಪೀಸನು ವಿಜಯನಗರ ಸಾಮ್ರಾಜ್ಯದಲ್ಲಿ ತನ್ನ ಪ್ರವಾಸದ ಅನುಭವಗಳನ್ನು ಬರೆದಿರುವ ಪುಸ್ತಕದಿಂದ ವ್ಯಕ್ತವಾಗುತ್ತದೆ. ತೇಜಸ್ವಿಗಳಾದ, ಚಿಕ್ಕಪ್ರಾಯದ ಈ ಯತಿಗಳನ್ನು ಪ್ರತಿನಿತ್ಯವೂ ಸಂದರ್ಶಿಸಿ ಅವರ ಸಲಹೆ, ಅನುಗ್ರಹವನ್ನು ಶ್ರೀಕೃಷ್ಣದೇವರಾಯನು ಪಡೆದ ನಂತರವೇ ಮುಂದಿನ ಕ್ರಮಗಳನ್ನು ಕೈಗೊಳ್ಳುತ್ತಿದ್ದನೆಂದು ತಿಳಿಸಿ, ಮುಕ್ತ ಕಂಠದಿಂದ ಈ ವಿದೇಶೀ ಪ್ರವಾಸಿಯಿಂದ ಪ್ರಶಂಸಿಲ್ಪಟ್ಟ ಹೆಗ್ಗಳಿಕೆ ಶ್ರೀವ್ಯಾಸರಾಜರದು,

ರಾಜನು ಧರ್ಮಿಷ್ಠನಾಗಿದ್ದನೆಂದೂ, ಪ್ರತಿಯೊಬ್ಬರಿಗೂ ನಾಡಿನೊಳಗೆ ಬಂದು ಹೋಗುವ ಸ್ವಾತಂತ್ರ್ಯವಿತ್ತೆಂದೂ, ವಿವಿಧ ಧರ್ಮದ ಜನರು ಯಾರ ಕಿರು ಕುಳವೂ ಇಲ್ಲದೆ, ಯಾವ ಬಲಾತ್ಕಾರವೂ ಇಲ್ಲದೇ ತಮ್ಮ ತಮ್ಮ ಧರ್ಮದಲ್ಲಿ ಪ್ರವೃತ್ತರಾಗಲು ಅವಕಾಶವಿತ್ತೆಂದು ಬಾರ್ಬೋಸಾ ಎಂಬ ವಿದೇಶೀಯನೊಬ್ಬ, ಮತೀಯ ಸೌಹಾರ್ದದ ಬಗ್ಗೆ ವಿವರಿಸಿದ್ದಾನೆ. ಹಿಂದೂ ಮುಸಲ್ಮಾನರಲ್ಲಿದ್ದ ವೈಷಮ್ಯವನ್ನು ನಿವಾರಿಸಿ, ಅಂತಃ ಕಲಹಗಳು ಅರಾಜಕತೆಯನ್ನು ಉಂಟು ಮಾಡು ವುದೆಂದು ತಿಳಿ ಹೇಳಿ, ಶ್ರೀಕೃಷ್ಣದೇವರಾಯನು ಸರ್ವಧರ್ಮ ಸಹಿಷ್ಣುವೆಂದು ಖ್ಯಾತನಾಗಲು ಅನುಗ್ರಹಿಸಿ ಅವಕಾಶ ಮಾಡಿಕೊಟ್ಟವರು ಶ್ರೀವ್ಯಾಸರಾಜರು. ಪರ ಸ್ಪರ ಸಹಕಾರದಿಂದ ಸೌಹಾರ್ದದಿಂದ, ತಮ್ಮ ತಮ್ಮ ಧರ್ಮಗಳನ್ನು ಅನುಸರಿ ಸುತ್ತಾ ಸಂತಸದಿಂದ ಜೀವನ ನಡೆಸುತ್ತಿದ್ದ ಪ್ರಜೆಗಳ ಅತ್ಯಂತ ಪ್ರಿಯ ಪಾಲಕನಾಗಿ ಶ್ರೀಕೃಷ್ಣದೇವರಾಯನನ್ನು ರೂಪುಗೊಳಿಸಿದ ಶಿಲ್ಪಿ ಶ್ರೀವ್ಯಾಸರಾಜರು. ಸ್ವತಃ ತಾವೇ ಕುರುಬ ಕನಕನನ್ನು ಅನುಗ್ರಹಿಸಿ, ಶಿಷ್ಯನನ್ನಾಗಿ ಸ್ವೀಕರಿಸಿ, ಅರ್ಹತೆ, ಜಾತಿ ಯನ್ನು ಮೀರಿ ನಿಲ್ಲುತ್ತದೆಂಬುದನ್ನು ನಿರೂಪಿಸಿದ್ದಾರೆ. ವಿವಿಧ ದರ್ಶನಗಳ ಧುರೀ ಣರೊಡನೆ ವಾಕ್ಯಾರ್ಥದಲ್ಲಿ ಜಯಿಸಿ, ದ್ವೈತ ಸಿದ್ಧಾಂತ ಸ್ಥಾಪನೆಯನ್ನು ಮಾಡಿ ದಾಗಲೂ, ಪರಾಭವಗೊಂಡ ಪಂಡಿತರನ್ನು ಆದರಿಸಿ, ಗೌರವಿಸಿ, ಸ್ನೇಹ ಹಸ್ತ ಗಳಿಂದ ಸತ್ಕರಿಸಿ ವ್ಯಕ್ತಿ ದ್ವೇಷದ ಪಿಡುಗನ್ನು ತೊಡೆದವರು ಶ್ರೀವ್ಯಾಸರಾಜರು.

ಶ್ರೀಕೃಷ್ಣದೇವರಾಯನಿಗೆ ಕುಹುಯೋಗ ಪ್ರಾಪ್ತವಾದಾಗ, ರಾಜನ ಪ್ರಾರ್ಥ ನೆಯನ್ನು ಮನ್ನಿಸಿ ಕರ್ನಾಟಕ ರತ್ನ ಸಿಂಹಾಸನವನ್ನೇರಿದ ಖ್ಯಾತಿ ಶ್ರೀವ್ಯಾಸರಾಜ ರದು. ರಾಜನಿಗೆ ಬಂದ ಕುಹುಯೋಗವನ್ನು ತಮ್ಮ ತಪಸ್ಸಿನ ಶಕ್ತಿಯಿಂದ ಪರಿ ಹರಿಸಿ, ಕೇವಲ ಕೆಲವೇ ಘಳಿಗೆಗಳ ರಾಜ್ಯಭಾರದಲ್ಲಿ, ಜಾತಿ, ಮತ, ಬಡವ, ಬಲ್ಲಿ ದರೆಂಬ ಭೇದವಿಲ್ಲದೇ ಸಮಸ್ತ ಪ್ರಜಾನೀಕಕ್ಕೆ ಮುಕ್ತ ಹಸ್ತದಿಂದ ದಾನ ಧರ್ಮ ಗಳನ್ನು ಮಾಡಿ ನಂತರ ಇಡೀ ಸಾಮ್ರಾಜ್ಯವನ್ನು ಶ್ರೀಕೃಷ್ಣದೇವರಾಯನಿಗೆ ವಹಿಸಿ ನಿಷ್ಕಾಮ ಕರ್ಮಿಯೆನಿಸಿದ ತ್ಯಾಗಿಗಳು ಶ್ರೀವ್ಯಾಸರಾಜರು. ತಿರುಪತಿ ಶ್ರೀನಿವಾಸನ ಸೇವೆ ಅನಿರೀಕ್ಷಿತವಾಗಿ, ಅಯಾಚಿತವಾಗಿ ಒದಗಿ ಬಂದಾಗ, ನಿರಂತರ ಹನ್ನೆರಡು ವರ್ಷಗಳ ಕಾಲ ಅನನ್ಯ ಭಕ್ತಿಯಿಂದ ಶ್ರೀನಿವಾಸನನ್ನು ಪೂಜಿಸಿ, ಅರ್ಚಕ ಮನೆ ತನದ ಬಾಲಕ ಪ್ರಾಪ್ತ ವಯಸ್ಕನಾದೊಡನೇ ಸ್ವಇಚ್ಛೆಯಿಂದ, ಸ್ವಸಂತೋಷದಿಂದ ತಮ್ಮ ಅಧಿಕಾರದ ಹಕ್ಕನ್ನು ವಹಿಸಿಕೊಟ್ಟ ಮಹಾನುಭಾವರು ಶ್ರೀವ್ಯಾಸರಾಜರು.

ವಿಶ್ವವಿದ್ಯಾನಿಲಯವೊಂದನ್ನು ರೂಪಿಸಿ ಪ್ರಪ್ರಥಮವಾಗಿ ಸ್ಥಾಪಿಸಿ, ಆ ಮೂಲಕ ವಿದ್ಯಾ ಪ್ರಸಾರಕ್ಕೆ ಚಾಲನೆ ನೀಡಿದ ಕೀರ್ತಿ ಶ್ರೀವ್ಯಾಸರಾಜರಿಗೆ ಸೇರಿದ್ದು. ಕೆರೆ, ಕಾಲುವೆಗಳನ್ನು ಜನತೆಯ ಉಪಯೋಗಕ್ಕಾಗಿ ತೋಡಿಸಿ ಅನೇಕ ಸಾಮಾಜಿಕ ಅಭಿವೃದ್ಧಿ ಕಾರ್ಯಕ್ರಮಗಳನ್ನು ಯೋಜಿಸಿ ಯಶಸ್ವಿಯಾಗಿ ನಿರ್ವಹಿಸಿ ಜನತೆಯ

ಈ ರೀತಿ ಇಹ–ಪರ ಸುಖಸಾಧನೆಗೆ ಕಾರಣವಾದ ಲೋಕ ನೀತಿಯನ್ನು ನುಡಿದು ಅದರಂತೆ ನಡೆದು ತೋರಿದ ಶ್ರೀವ್ಯಾಸರಾಜರ ದಿವ್ಯ ತೇಜೋ ಮೂರ್ತಿಗೆ ಅನಂತ ನಮನಗಳು.

000

---

## ಮಧ್ವಮತ ಸಂಗ್ರಹ

ಶ್ರೀ ಮನ್ಮಧ್ವಮತೇ ಹರಿಃ ಪರತರಃ
ಸತ್ಯಂ ಜಗತ್ ತತ್ವತೋ
ಭೇದೋ ಜೀವಗಣಾಃ ಹರೇರನುಚರಾಃ
ನೀಚೋಚ್ಚಭಾವಂ ಗತಾಃ ।

ಮುಕ್ತಿರ್ನೈಜ ಸುಖಾನುಭೂತಿರಮಲಾ
ಭಕ್ತಿಶ್ಚ ತತ್ಸಾಧನಂ
ಹ್ಯಕ್ಷಾದಿ ತ್ರಿತಯಂ ಪ್ರಮಾಣ ಮಖಿಲಾ
ಮ್ನಾಯೈಕ ವೇದ್ಯೋ ಹರಿಃ ॥

ಈ ಶ್ಲೋಕ ವ್ಯಾಸತೀರ್ಥರಚಿತವೆಂದು ಪ್ರಸಿದ್ಧಿ. ಕಂಚಿಯ ಪಂಡಿತರ ಪ್ರಾರ್ಥನೆಯಂತೆ ಇದನ್ನು ರಚಿಸಲಾಯಿತೆಂದು ಕೆಲವರೆಂದರೆ, ಬಸವಭಟ್ಟನ ವಾದ ಸಂದರ್ಭದಲ್ಲಿ ರಚಿತವೆಂದು ಮತ್ತೆ ಕೆಲವರು. ಇನ್ನೂ ಕೆಲವರು ಉತ್ಕಲದ ಗಜಪತಿ ದೊರೆಯ ಆಸ್ಥಾನದಲ್ಲಿದ್ದ 'ಅದ್ವೈತ ಪಂಡಿತನಿಗೆ' ಅವನ ವೇದಾರ್ಥ ಸಂಗ್ರಹವೆಂಬ ಗ್ರಂಥಕ್ಕೆ ಖಂಡನರೂಪವಾಗಿ ಬರೆದದ್ದೆನ್ನುತ್ತಾರೆ.

---

# ಶ್ರೀವ್ಯಾಸರಾಜರು ಪ್ರತಿಷ್ಠಾಪಿಸಿದ ಮುಖ್ಯಪ್ರಾಣ ಪ್ರತೀಕಗಳು

–ಇಂದಿರಮ್ಮ ರಾಘವೇಂದ್ರರಾವ್

" ದ್ವಾತ್ರಿಂಶತ್ಸಪ್ತ ಶತಕ ಮೂರ್ತೀರ್ಹನುಮತಃ ಪ್ರಭೋಃ ।
ಪ್ರತಿಷ್ಠಾತಾಸ್ಮೃತಿ ಖ್ಯಾತಸ್ತಂ ಭಜೇ ವ್ಯಾಸಯೋಗಿನಂ ॥"

ಎಂಬ, ಶ್ರೀವ್ಯಾಸರಾಜರ ಶಿಷ್ಯರೆನಿಸಿದ ವಿಜಯೀಂದ್ರರ ನುಡಿಯನ್ನು, ಶ್ರೀವ್ಯಾಸ ರಾಜ ಮಠದ ಪರಂಪರೆಯ ಶ್ರೀ ವಿದ್ಯಾರತ್ನಾಕರತೀರ್ಥರು ದೃಢೀಕರಿಸಿದ್ದಾರೆ. ಇದು ಶ್ರೀವ್ಯಾಸರಾಜರು ದೇಶಾದ್ಯಂತ ಒಟ್ಟು 732 ಶ್ರೀ ಮುಖ್ಯಪ್ರಾಣ ಪ್ರತೀಕಗಳನ್ನು ಪ್ರತಿಷ್ಠಾಪನೆ ಮಾಡಿದ್ದಾರೆಂದು ಸೂಚಿಸುತ್ತದೆ. ಈ ಸಂಖ್ಯೆಗೆ ಕಾರಣವೆನಿಸುವ ಪ್ರಚಲಿತ ಕಥೆಯೊಂದು ಹೀಗಿದೆ.–

ಒಮ್ಮೆ ಶ್ರೀವ್ಯಾಸರಾಜರು ತಮ್ಮ ಗುರುಗಳಾದ ಶ್ರೀಪಾದರಾಜರಿಗೆ ತಮ್ಮ ಜಯ ಪತ್ರಿಕೆಗಳನ್ನು ಸಮರ್ಪಿಸಲೆಂದು ಹಂಪೆಯಿಂದ ಮುಳಬಾಗಿಲಿಗೆ ಬಂದ ಸಂದರ್ಭದಲ್ಲಿ, ಒಂದು ದಿನ ಅವರಿಗೆ ವಿಚಿತ್ರ ಸ್ವಪ್ನವಾಯಿತಂತೆ. ಸ್ವಪ್ನದಲ್ಲಿ ಅವರು ಶ್ರೀ ಪ್ರಾಣದೇವರನ್ನು ಪೂಜಿಸಿದಂತೆಯೂ ಅದು ನೋಡು ನೋಡುತ್ತಿದ್ದಂತೆಯೇ ವಿಭಜನೆ ಹೊಂದಿ ಏಳುನೂರ ಮುವತ್ತೆರಡು ಮೂರ್ತಿಗಳಾಗಿ ತೋರಿದಂತೆಯೂ ಭಾಸವಾಯಿತಂತೆ. ಸ್ವಪ್ನದಿಂದ ಎಚ್ಚೆತ್ತ ನಂತರ ಶ್ರೀವ್ಯಾಸರಾಜರು 732 ಮುಖ್ಯ ಪ್ರಾಣ ಪ್ರತೀಕಗಳನ್ನು ಪ್ರತಿಷ್ಠಾಪಿಸುವ ಯೋಜನೆ ಕೈಗೊಂಡರಂತೆ.

ಶ್ರೀವ್ಯಾಸರಾಜರು ಪ್ರತಿಷ್ಠಾಪಿಸಿದ ಪ್ರಪ್ರಥಮ ಮೂರ್ತಿ ಹಂಪೆಯ ಚಕ್ರ ತೀರ್ಥದ ಸಮೀಪದಲ್ಲಿರುವ ಶ್ರೀ ಯಂತ್ರೋದ್ಧಾರಕ ಪ್ರಾಣದೇವರೆಂಬ ಪ್ರತೀತಿಯಿದೆ. ಶ್ರೀವ್ಯಾಸರಾಜರು ವಿಜಯನಗರದಲ್ಲಿರುವಾಗ, ಚಕ್ರತೀರ್ಥದಲ್ಲಿ ಪ್ರತಿ ನಿತ್ಯವೂ ಸ್ನಾನಾಹ್ನಿಕಗಳನ್ನು ಮುಗಿಸಿ, ಸಮೀಪದಲ್ಲಿಯೇ ಧ್ಯಾನಕ್ಕೆ ಕುಳಿತು ಕೊಳ್ಳುತ್ತಿದ್ದರಂತೆ. ಒಮ್ಮೆ ಅವರು ಹೀಗೆ ಧ್ಯಾನಕ್ಕೆ ಕುಳಿತಾಗ, ಬಂಡೆಯೊಂದರಿಂದ ಕಪಿಯೊಂದು ಬಂದು ಕಣ್ಮರೆಯಾಯಿತಂತೆ. ಈ ಘಟನೆ ಹಲವು ಬಾರಿ ಪುನರಾವರ್ತನೆಯಾದ ನಂತರ, ಒಮ್ಮೆ ಸ್ವಪ್ನ ಸೂಚನೆಯಾಗಿ. ಅದು ವನವಾಸಕ್ಕೆ ಆಗಮಿ

ಸಿದ ಶ್ರೀ ರಾಮಚಂದ್ರನ ಪ್ರಪ್ರಥಮ ದರ್ಶನ ಶ್ರೀ ಪ್ರಾಣದೇವರಿಗೆ ದೊರೆತ ಸ್ಥಳ ವೆಂದು ಅರಿವಾಯಿತು. ಕೂಡಲೇ ಶ್ರೀವ್ಯಾಸರಾಜರು ಅದೇ ಬಂಡೆ ಕಲ್ಲಿನ ಮೇಲೆ ಅಂಗಾರದಿಂದ ಪ್ರಾಣದೇವರನ್ನು ಬರೆದು ದ್ವಾದಶ ನಾಮಗಳನ್ನು ತಿದ್ದಿದಾಗ, ಕೂಡಲೇ ಜೀವ ತಳೆದ ಮೂರ್ತಿಯು ಹಾರಿ ಮಾಯವಾಯಿತು. ಶ್ರೀವ್ಯಾಸ ರಾಜರು ಮತ್ತೆ ಮತ್ತೆ ಅಂಗಾರದಿಂದ ಚಿತ್ರಿಸುವುದೂ, ಮೂರ್ತಿಯು ಜೀವ ತಳೆದು ಮಾಯವಾಗುವುದೂ ಹನ್ನೆರಡು ಬಾರಿ ಘಟಿಸಿತು. ಕೂಡಲೇ ಅವರು ಮನದಲ್ಲೇ ಧ್ಯಾನಿಸಿ ಕಾರಣವನ್ನು ಅರಿತವರಾದರು. ನಂತರ ಮೊದಲು ಷಟ್ಕೋ ನವನ್ನೂ, ಅದರ ಸುತ್ತ ವಲಯಾಕಾರವನ್ನು ಯಂತ್ರದಂತೆ ರಚಿಸಿ, ಅದರ ಸುತ್ತಲೂ ಪದ್ಮ ದಳಗಳನ್ನು ಬರೆದರು. ಮಧ್ಯದಲ್ಲಿ ಯೋಗಾಸನಾರೂಢರಾಗಿ ಜಪಮಾಲೆ ಹಿಡಿದು ಕುಳಿತ ಧ್ಯಾನಮಗ್ನ ಮುಖ್ಯ ಪ್ರಾಣದೇವರನ್ನು ಬರೆದು, ಮೊದಲು ಹಾರಿ ಹೋದ ಹನ್ನೆರಡು ಕಪಿಗಳನ್ನೂ ಪದ್ಮದಳಗಳ ತುದಿಯಲ್ಲಿ ಮುಖ್ಯ ಪ್ರಾಣನಿಗೆ ಮಾಲಾಕಾರವಾಗಿ ಕಪಿ ಬಂಧ ಹೆಣೆದರು. ಈ ಯಂತ್ರದಲ್ಲಿ ಒಂದು ಕೋಟಿ ಬೀಜಾಕ್ಷರಗಳು ಅಡಕವಾಗಿದೆಯೆಂದೂ, ಇದರ ಸಿದ್ಧಿಗಾಗಿ ಶ್ರೀವ್ಯಾಸ ರಾಜರು ಮೂರು ಕೋಟಿ ಮಂತ್ರಗಳನ್ನು ಜಪಿಸಿ ಶ್ರೀ ಪ್ರಾಣದೇವರ ಸನ್ನಿಧಾನ ವನ್ನು ಸ್ಥಿರವಾಗಿ ನಿಲ್ಲಿಸಿದ್ದಾರೆಂದು, ಅಪರೋಕ್ಷ ಜ್ಞಾನಿಗಳೆನಿಸಿದ ಶ್ರೀ ವಿಜಯ ದಾಸರು ತಮ್ಮ ಯಂತ್ರೋದ್ಧಾರಕ ಸುಳಾದಿಯಲ್ಲಿ ಹೀಗೆ ಹೇಳಿದ್ದಾರೆ—

" ಮೂರು ಕೋಟಿ ಬೀಜಾಕಾರ ಮಂತ್ರವ ಜಪಿಸಿ ವ್ಯಾಸರಾಯನು ।
ಎರೆದ ನಿನ್ನ ಈ ಸುಂದರ ಮೂರುತಿಯಲಿ । ನಿರ್ಮಾಣವನ್ನು ಮಾಡಿ
ಮಾಡಿದರು ಆರು ಕೋಣೆ ವಲಯಾ । ಕಾರ ವಾನರ ಬಂಧ
ಚಾರು ಶೋಭಿತ ತುಂಗ । ತೀರದಲ್ಲಿ ವಾಸಾ ವೀರ ವಿಜಯ ವಿಠಲನ್ನ ।
ಕಾರುಣ್ಯದಲಿಗನುಗಣ್ಯ ವಾಗಿ ನಿಂದೆ ॥" ಇದರ ಅಪಾರ ಮಹಿಮೆಯನ್ನು

ಕೊಂಡಾಡಿದ್ದಾರೆ.

ಸ್ವತಃ ಶ್ರೀವ್ಯಾಸರಾಜರೇ " ನಮಾಮಿ ದೂತಂ ರಾಮಸ್ಯ ಸುಖದಂ ಚ ಸುರದ್ರುಮಂ " ಎಂದು ಅಷ್ಟಕವನ್ನು ರಚಿಸಿ ಶ್ರೀ ಯಂತ್ರೋದ್ಧಾರಕ ಪ್ರಾಣದೇವರ ಅಪಾರ ಮಹಿಮೆಯನ್ನು, ಅದನ್ನು ಭಕ್ತಿಯಿಂದ ಸೇವಿಸುವವರಿಗೆ ದೊರೆಯುವ ಸಿದ್ಧಿ ಯನ್ನೂ ವರ್ಣಿಸಿದ್ದಾರೆ. ಇಂದಿಗೂ ಭಕ್ತ ಜನರ ಕಷ್ಟಗಳನ್ನು ನಿವಾರಿಸಿ, ಶ್ರೀ ಪ್ರಾಣದೇವರು ಇಲ್ಲಿ ಅನುಗ್ರಹಿಸುತ್ತಿರುವ ಸತ್ಯದ ಅರಿವು ಅರಿಯದವರು ವಿರಳ.

ಇನ್ನು ಮುಳಬಾಗಿಲಿನ ನರಸಿಂಹತೀರ್ಥದ ಬಳಿಯಲ್ಲಿರುವ ಶ್ರೀ ಪ್ರಾಣ ದೇವರ ವಿಗ್ರಹವು ಶ್ರೀವ್ಯಾಸರಾಜರು ಪ್ರತಿಷ್ಠಾಪಿಸಿದ ದ್ವಿತೀಯ ಮೂರ್ತಿ ಎಂದೂ, ಚನ್ನಪಟ್ಟಣದ ಸಮೀಪದಲ್ಲಿರುವ ದೇವರ ಹೊಸಹಳ್ಳಿಯ ಮೂರ್ತಿ ಐದನೆಯ

ದೆಂಡೂ ತಿಳಿಯುತ್ತದೆ. ಬನ್ನೂರಿನ ಕೋದಂಡರಾಮ ದೇವಾಲಯದಲ್ಲಿ ಹಾಗೂ ಅಲ್ಲಿರುವ ಅವರ ಜನ್ಮ ಸ್ಥಳದಲ್ಲಿ, ಬದರೀ ಕ್ಷೇತ್ರದಲ್ಲಿ, ಚಿಂತ್ರವೇಲಿ, ಅಬ್ಬೂರು, ರಾಯಚೂರು, ಯಲಗೂರು, ಅಜನೂರು, ತುಮಕೂರು, ಚಿಕ್ಕಬಳ್ಳಾಪುರ ಮುಂತಾದ ಸ್ಥಳಗಳಲ್ಲಿರುವ ಶ್ರೀ ಪ್ರಾಣದೇವರ ಮೂರ್ತಿಗಳು ಶ್ರೀವ್ಯಾಸರಾಜರಿಂದ ಪ್ರತಿಷ್ಠಾಪಿಸಲ್ಪಟ್ಟಿವೆ ಎಂದೇ ಖ್ಯಾತವಾಗಿವೆ. ಶ್ರೀವ್ಯಾಸರಾಜರು ಪ್ರತಿಷ್ಠಾಪಿಸಿದ ಕುರುಹಾಗಿ, ಸಾಮಾನ್ಯವಾಗಿ ಇವುಗಳ ಬಾಲಕ್ಕೆ ಗಂಟೆಯಿರುವುದೊಂದು ವಿಶೇಷ. ಇದಲ್ಲದೇ ಬೆಂಗಳೂರು ನಗರದ ಮೈಸೂರು ರಸ್ತೆಯಲ್ಲಿರುವ ಕರೆಕಲ್ಲು ಆಂಜನೇಯ ಸ್ವಾಮಿಯೂ, ದೊಡ್ಡಬಳ್ಳಾಪುರ ಸಮೀಪದ ಅರಳುಮಲ್ಲಿಗೆ ಗ್ರಾಮದಲ್ಲಿರುವ ಪ್ರಾಣದೇವರ ಮೂರ್ತಿಯೂ, ಶ್ರೀವ್ಯಾಸರಾಜ ಪ್ರತಿಷ್ಠಿತ ಮೂರ್ತಿಗಳೆಂದೇ ಪ್ರಸಿದ್ಧವಾಗಿವೆ. ಈ ಎಲ್ಲ ಮೂರ್ತಿಗಳಲ್ಲಿಯೂ, ಪ್ರಾಣದೇವರ ವಿಶೇಷ ಸನ್ನಿಧಾನವಿದ್ದು, ಭಕ್ತಾಭೀಷ್ಟ ಫಲ ಪ್ರದಾಯಕವೆನಿಸಿ, ಇಂದಿಗೂ ಅಸಂಖ್ಯ ಭಕ್ತ ವೃಂದವನ್ನು ಅನುಗ್ರಹಿಸುತ್ತಿರುವುದು ಹುಸಿಯಲ್ಲ. ಅದರಲ್ಲೂ ಅರಳುಮಲ್ಲಿಗೆ ಗ್ರಾಮದಲ್ಲಿರುವ ಶ್ರೀ ಆಂಜನೇಯ ಮೂರ್ತಿಯ ಮಹಿಮೆಯನ್ನು ತಿಳಿಸುವ ಪ್ರಚಲಿತ ರಮ್ಯ ಕಥೆಯೊಂದು ಹೀಗಿದೆ—

ಒಮ್ಮೆ ಭಕ್ತರೊಬ್ಬರು ತಮ್ಮ ಕಾರ್ಯಸಾಧನೆಗಾಗಿ ಚಿನ್ನದ ಮಲ್ಲಿಗೆ ಮೊಗ್ಗುಗಳಿಂದ ಪೂಜಿಸುವ ಹರಕೆ ಹೊತ್ತಿದ್ದರಂತೆ. ಆದರಂತೆಯೇ ತಮ್ಮ ಅಭೀಷ್ಟ ಕೈಗೂಡಿದೊಡನೆಯೇ ಅವರು ಭಕ್ತಿಯಿಂದ, ಚಿನ್ನದ ಮಲ್ಲಿಗೆಯ ಮೊಗ್ಗುಗಳನ್ನು ಶ್ರೀ ಪ್ರಾಣದೇವರಿಗೆ ಅರ್ಪಿಸಿ ಪೂಜಿಸಿದರಂತೆ. ಭಕ್ತರ ಈ ಸೇವೆಯನ್ನು ಸ್ವೀಕರಿಸಿದ ಕುರುಹಾಗಿ, ಚಿನ್ನದ ಮೊಗ್ಗುಗಳು ಮರುದಿವ ಬೆಳಗಿನ ವೇಳೆಗೆ ಬಿರಿದು ಅರಳಿದ್ದುವಂತೆ. ಈ ಅದ್ಭುತ ಪವಾಡವನ್ನು ಕಂಡ ಇಡೀ ಗ್ರಾಮದ ಜನತೆ ಆಶ್ಚರಿಗೊಂಡರೆಂದೂ, ಅಂದಿನಿಂದ ಆ ಗ್ರಾಮವು ಅರಳುಮಲ್ಲಿಗೆ ಎಂಬ ನೂತನ ಅಭಿಧಾನವನ್ನು ಪಡೆಯಿತೆಂದೂ ಸ್ಥಳ ಪುರಾಣವಿದೆ.

ಇದಲ್ಲದೇ, ಅಂದಿನ ವಿಜಯನಗರದ ಆಡಳಿತಕ್ಕೆ ಒಳಪಟ್ಟಿದ್ದ ಪೆನುಗೊಂಡೆಯಲ್ಲಿ ಶ್ರೀವ್ಯಾಸರಾಜರು ಒಂದು ವರ್ಷಕಾಲ ತಂಗಿದ್ದರೆಂತಲೂ, ಈ ಅವಧಿಯಲ್ಲಿ, ಪ್ರತಿನಿತ್ಯವೂ ಒಂದೊಂದರಂತೆ 365 ಪ್ರಾಣದೇವರ ಮೂರ್ತಿಗಳನ್ನು ಪ್ರತಿಷ್ಠಾಪಿಸಿದರೆಂದೂ ಪ್ರತೀತಿಯಿದೆ. ಇದುವರೆಗೆ ಅಲ್ಲಿ 350 ವಿಗ್ರಹಗಳು ದೊರೆತಿರುವುದಾಗಿ ಉಲ್ಲೇಖವಿದೆ. ಊರ ನಾಲ್ಕು ದಿಕ್ಕುಗಳಲ್ಲೂ ಪ್ರಾಣದೇವರ ಗುಡಿಗಳಿವೆ. ಅದಲ್ಲದೇ, ಇಂದಿಗೂ ಅಲ್ಲಿ ಮನೆ ಕಟ್ಟಲು ಪಾಯತೆಗೆಸುವಾಗಲಾಗಲೀ, ನೀರಿಗಾಗಿ ಬಾವಿ ತೋಡುವಾಗಲಾಗಲೀ, ಶ್ರೀ ಪ್ರಾಣದೇವರ ವಿಗ್ರಹ ದೊರಕುವುದು ಅಪರೂಪವೇನಲ್ಲ, ಶ್ರೀವ್ಯಾಸರಾಜರು 365 ವಿಗ್ರಹಗಳನ್ನು ಅಲ್ಲಿಯೇ ಪ್ರತಿಷ್ಠಾಪಿಸಿರಬೇಕಾದರೆ, ಆ ಸ್ಥಳದ ಹಿನ್ನೆಲೆ ಅತ್ಯಂತ ಮಹತ್ವದ್ದಿರಬೇಕು. ಅಲ್ಲಿನ ಸ್ಥಳೀಕರು,

ಅದು ತಪೋಭೂಮಿ ಎಂದೂ, ಹಿಂದಿನ ಯುಗಗಳಲ್ಲಿ ಯಜ್ಞ ಯಾಗಾದಿಗಳು ನಡೆದ ಸ್ಥಳವೆಂದೂ, ಅಲ್ಲಿ ಮೂರು ಮುಕ್ಕಾಲು ಗಳಿಗೆಗಳ ಪರ್ಯಂತ ಸುವರ್ಣ ವೃಷ್ಟಿ ಯಾಗುತ್ತದೆಂದೂ ವರ್ಣಿಸುತ್ತಾರೆ. ಆ ಸುವರ್ಣವನ್ನು ಸಂಗ್ರಹಿಸಿ ಅದನ್ನು ಭೂ ಸ್ಥಾಪನೆ ಮಾಡಿದ ಫಲವಾಗಿ, ಅನೇಕ ಕಡೆ ಇತ್ತೀಚಿನವರೆಗೂ ದೊರಕುತ್ತಿತ್ತೆಂದು ಆ ಸ್ಥಳದ ಹಿರಿಯರನೇಕರು ನುಡಿದಿದ್ದಾರೆ. ಇಷ್ಟು ಅದ್ಭುತ ರಹಸ್ಯಗಳನ್ನು ಒಳ ಗೊಂಡ, ಒಂದಾನೊಂದು ಕಾಲದಲ್ಲಿ ರಾಜಧಾನಿಯಾಗಿ ಮೆರೆದ ಪೆನುಗೊಂಡೆಯ ಕ್ಷೇತ್ರದ ಮಹಿಮೆಯ ಬಗ್ಗೆ. ಅಲ್ಲಿ ಶ್ರೀವ್ಯಾಸರಾಜರು ಒಂದು ವರ್ಷ ತಂಗಿದ್ದ ಕಾರಣಗಳ ಬಗ್ಗೆ ಸಂಶೋಧನಕಾರರು ಬೆಳಕು ಚೆಲ್ಲಿದಲ್ಲಿ, ಆಸ್ತಿಕ ಜನತೆಗೆ ಮಹೋಪಕಾರವಾಗುತ್ತದೆ.

○ ○ ○

---

## ವೆಲ್ಲಿಕಾಯಕಿ ಮೂಣು ಕಟ್ಟು

' ಎರಿಂಜ ಪೋನ ವೆಲ್ಲಿಕಾಯಕಿ ಮೂಣು ಕಟ್ಟು ಪೋಟ್ಟಾರ್ ವ್ಯಾಸರ್ ' ಸೀಳಿದ ಸೌತೆಕಾಯಿಗೆ ಮೂರು ಕಟ್ಟು ಹಾಕಿದರು ವ್ಯಾಸರು. ಇಲ್ಲಿ ಬಿರುಕುಬಿಟ್ಟ ಸೌತೆಕಾಯಿ ಯೆಂದರೆ ದ್ವೈತ ಸಿದ್ಧಾಂತ. ಅದಕ್ಕೆ ವ್ಯಾಸರು ಹಾಕಿದ ಮೂರು ಕಟ್ಟು ' ವ್ಯಾಸ ತ್ರಯ ' ಇದು ಅದ್ವೈತ ಪಂಡಿತರಾದ ಅಪ್ಪಯ್ಯ ದೀಕ್ಷಿತರ ಉದ್ಗಾರ.

## A LEARNED BRAHMIN

'ನ್ಯೂನಿಜ' ಪೋರ್ಚುಗೀಸಿನ ವ್ಯಾಪಾರಿ. ಅವನು ತನ್ನ ವರದಿಯಲ್ಲಿ ಹೀಗೆ ಉಲ್ಲೇಖಿಸಿದ್ದಾನೆ—

*Every day he ( the King of Bisnaga ) hears the preaching of a learned Brahmin, who never married nor touched a woman.*

ಇವರೇ ವ್ಯಾಸತೀರ್ಥರಾಗಿರಬಹುದಲ್ಲವೆ.

---

ಹರಿದಾಸ ಸಾಹಿತ್ಯ ದಾರಿದೀಪ

# ಶ್ರೀವ್ಯಾಸರಾಯರು

---

ಚಿಂಚೋಳಿ ಪ್ರಹ್ಲಾದಾಚಾರ್ಯ

ಶ್ರೀವ್ಯಾಸರಾಯರಿಂದ ಹರಿದಾಸ ಪಂಥಕ್ಕೆ ಆಗಿರುವ ವಿಶೇಷ ಉಪಕಾರವೆಂದರೆ ಶ್ರೀ ಪುರಂದರದಾಸರ ಕೃತಿಗಳಿಗೆ "ಪುರಂದರೋಪನಿಷತ್" ಎಂದು ಕರೆದು ಅವರ ಬಗ್ಗೆ ವಿಸ್ತಾರ ಕೃತಿಯನ್ನೇ ರಚಿಸಿ "ದಾಸರೆಂದರೆ ಪುರಂದರ ದಾಸರಯ್ಯ . . ಪೂತಾತ್ಮ ಪುರಂದರ ದಾಸರಿವರಯ್ಯಾ" ಎಂದಿದ್ದು ಹಾಗೂ ದಾಸ ಪಂಥವನ್ನು ಬೆಳಸಿದ್ದೂ ಬಹು ಗಮನಾರ್ಹವಾದುದು. ಇವರು ಪುರಂದರದಾಸರು, ಕನಕ ದಾಸರು, ಕೃಷ್ಣಚೈತನ್ಯ ಇತ್ಯಾದಿಗಳ ಮೂಲಕ ದಾಸ ಸಾಹಿತ್ಯ ಬೆಳೆಸಿದ್ದು ಶ್ಲಾಘನೀಯ. ಶ್ರೀವ್ಯಾಸರಾಯರು ಈ ಹೊಸ ಕ್ರಮವನ್ನೇನಾದರೂ ಚಾಲತಿಗೆ ತರದಿದ್ದಿದ್ದರೆ ಸಾಂಪ್ರದಾಯಿಕ ಕ್ರಮದಿಂದ ಮೂಲ ಸಂಸ್ಕೃತ ಗ್ರಂಥಾಧ್ಯಯನಾ ಭಾವದಿಂದ ಆಸ್ತಿಕತ್ವವೇ ಸಂಪೂರ್ಣ ನಶಿಸಿ ಹೋಗುತ್ತಿತ್ತು. ಆದ್ದರಿಂದ ಹರಿದಾಸ ಪಂಥ ಸ್ಥಾಪಕರಲೊಬ್ಬರಾದ ಶ್ರೀವ್ಯಾಸರಾಯರ ಕಾರ್ಯ ಅತ್ಯಂತ ಸ್ತುತ್ಯವಾದುದು.

ಈ ದಾಸ ಸಾಹಿತ್ಯವು ಶ್ರೀ ವೇದವ್ಯಾಸರ ಶಾಸ್ತ್ರಗ್ರಂಥ, ಶ್ರೀಮದಾಚಾರ್ಯರ ಸರ್ವಮೂಲ ಗ್ರಂಥ ಶ್ರೀ ಜಯತೀರ್ಥರ ಟೀಕಾ ಗ್ರಂಥಗಳು ಹಾಗೂ ಅನೇಕಾನೇಕ ಜ್ಞಾನಿಗಳ ಟಿಪ್ಪಣಿ ಗ್ರಂಥಗಳ ಕೇವಲ ಭಾಷಾಂತರವೇ ಹೊರತು ಮತ್ತೆ ಬೇರಿಲ್ಲವಾದ್ದರಿಂದ ಇದರ ಅಧ್ಯಯನದಿಂದ ಮೂಲಗ್ರಂಥಾಧ್ಯಯನದ ಕಡೆ ವಿಶ್ವಾಸ, ನೈಜತತ್ವಜ್ಞಾನ ಕೊನೆಗೆ ಮೋಕ್ಷ ಹೇತುವಾಗಿಯೂ ಇದೆ ಎಂಬುದು ನಿರ್ವಿವಾದ. ಪರಮ ಪೂಜ್ಯ ಪೇಜಾವರ ಮಠಾಧೀಶರು ಕೂಡ ಡಿಸೆಂಬರ್ 1984ರ ತತ್ವವಾದದಲ್ಲಿ ದಾಸ ಸಾಹಿತ್ಯ ಮೋಕ್ಷಹೇತು ಎಂಬ ಸ್ಪಷ್ಟಾಭಿಪ್ರಾಯವನ್ನು ಹೊರಗೆಡಹಿ ಅನುಗ್ರಹಿಸಿರುತ್ತಾರೆ.

**ದಾಸ ಸಾಹಿತ್ಯದಲ್ಲಿ ಬ್ರಹ್ಮಸೂತ್ರ ಭಾಷ್ಯ.**

ಶ್ರೀವ್ಯಾಸರಾಯರು ಶ್ರೀಮದ್ ಬ್ರಹ್ಮಸೂತ್ರದ ಪ್ರಥಮ ಸೂತ್ರವಾದ

"ಓಂ ಅಥಾತೋ ಬ್ರಹ್ಮ ಜಿಜ್ಞಾಸಾ" ಎಂಬ ಸೂತ್ರಕ್ಕೆ ಶ್ರೀಮದಾಚಾರ್ಯರ ಭಾಷ್ಯ ಕ್ಕನುಗುಣವಾಗಿ ವಿಚಿತ್ರ ರೀತ್ಯ ಒಂದು ಉಗಾಭೋಗದಲ್ಲಿ–

ಜಿಜ್ಞಾಸುವಿಗೆ ಜ್ಞಾನ ಕಾರಣ । ಜ್ಞಾನಿಗೆ ಅಪರೋಕ್ಷ ಕಾರಣ । ಅಪ ರೋಕ್ಷಿಗೆ ಅಧಿಕಾನಂದ ಕಾರಣ । ಮುಕ್ತಿಗೆ ತಾನೇ ಫಲ ರೂಪ । ಸಿರಿ ಕೃಷ್ಣನ ಪಾದ ಸೇವೆ । ಇದರ ತೂಕಕ್ಕೆ ಸಾಕೇ ಕೈವಲ್ಯ ॥ ಎಂದಿರುತ್ತಾರೆ. ಹೀಗೆ ಹುಡು ಕುತ್ತಾ ಹೋದರೆ ಎಲ್ಲಾ 564 ಬ್ರಹ್ಮ ಸೂತ್ರಗಳಿಗೂ ದಾಸವಾಣಿ ಲಭಿಸುತ್ತದೆ.

**ಶ್ರೀವ್ಯಾಸರಾಯರ ಕೃತಿ ವೈಶಿಷ್ಟ್ಯತೆ.**

ಪ್ರಾರಂಭದಲ್ಲಿ ಶ್ರೀವ್ಯಾಸರಾಯರು "ಗಜ ಮುಖನೆ ಸಿದ್ಧಿದಾಯಕನೆ ಶರಣು" ಎಂದು ಗಣಪತಿಯನ್ನು ಕೊಂಡಾಡಿ, ಅವನ ಅಪ್ಪ ರುದ್ರ ದೇವರನ್ನು "ನಮೋ ಪಾರ್ವತಿ ನುತ ಜನಪರ ನಮೋ ವಿರೂಪಾಕ್ಷ ರಮಾರಮಣನಲ್ಲಮಲ ಭಕ್ತಿ ಕೊಡೋ ನಮೋ ವಿರೂಪಾಕ್ಷ" ಎಂದು ಪ್ರಾರಂಭಿಸಿ ಅವರೇ "ಶ್ರೀಮನ್ ಮಧ್ವ ಮತೇ ಹರಿ ಪರತರಃ. . . ಮುಕ್ತಿರ್ನೈಜ ಸುಖಾನುಭೂತಿಃ ಅಮಲಾ ಭಕ್ತಿಶ್ಚ ತತ್ಸಾಧನಂ. . ." ಎಂಬುದನ್ನು ನಿರೂಪಿಸುತ್ತಾ ಕೊನೆಗೆ "ಕರ್ತೃ ಉಡುಪಿ ಸರ್ವೋತ್ತಮ ಕೃಷ್ಣನ ಪೌತ್ರ ಕೃಪಾಪಾತ್ರ" ಎಂಬ ಪಂಚಭೇದ ತಾರತಮ್ಯ ವಿಚಾರ ವಿಚಿತ್ರವಾಗಿ ತಿಳಿಸಿದ್ದಾರೆ. ಶ್ರೀವ್ಯಾಸರಾಯರು ಗುರು ಪರಂಪರೆಯನ್ನೆಲ್ಲಾ ಕೊಂಡಾಡುತ್ತಾ ಶ್ರೀ ಜಯತೀರ್ಥರ ಬಗ್ಗೆ "ಎದುರ್ಯಾರೋ ಗುರುವ ಸಮರ್ಯಾರೋ, ಮದನ ಗೋಪಾಲನ ಪ್ರಿಯ ಜಯರಾಯ" ಎಂಬ ಕೃತಿಯಲ್ಲಿ ಅವರನ್ನು ಸಿಂಹ, ಸೂರ್ಯ, ಚಂದ್ರ, ಕಾಮಧೇನು, ಅಂಜನ, ಸಮುದ್ರ ಮಥನಾದಿಗಳಿಗೆ ಹೋಲಿಸಿದ ಕ್ರಮ ಅವರ್ಣನೀಯ. ಇವರ ಪ್ರಾಣದೇವರ ಕೃತಿಗಳು ಮೇಲ್ಪಟ್ಟದ್ದು, 732 ಪ್ರಾಣ ದೇವರ ಮೂರ್ತಿಗಳನ್ನು ತಾವೇ ರಚಿಸಿದ ಅದ್ಭುತ ಶಿಲ್ಪಿಗಳು, ಸಂಖ್ಯಾ ಸೂಚಕ ವಿಚಿತ್ರ ಕೃತಿ ಇವರ ಮಹತ್ವವನ್ನು ಎತ್ತಿತೋರುತ್ತಿದೆ.

ರಾಗ : **ಕಾಂಬೋಜಿ.** ತಾಳ : **ಝಂಪೆ**

ಆರು ನಿನಗಿದಿರಧಿಕ ಧಾರುಣೀಯೊಳಗೆ । ಸಾರ ಶಾಸ್ತ್ರವನೊರೆದ ಸರ್ವಜ್ಞ
ಮುನಿರಾಯ ॥ಪ॥

ಆರೊಂದು ವೈರಿಗಳ ತರಿದು ವೈಷ್ಣವರಿಗೆ । ಆರೆರಡು ಊರ್ಧ್ವ ಪುಂಡ್ರಗಳ ಇಡಿಸಿ ।
ಆರು ಮೂರರ ಮೇಲೆ ಮೂರಧಿಕ ಕುಮತಗಳ । ಬೇರೂರಿಸಿ ಕಿತ್ತೊಮ್ಮೆ ಬಿಸು
ಟಂಥಾ ಧೀರಾ ॥೧॥

ಆರು ನಾಲ್ಕು ತತ್ವಾಭಿ ಮಾನಿಗಳಿಗೊಡೆಯ । ಮಾರುತನ ಮೂರನೆಯ ಅವತಾ

ರನೆ। ಆರೈದು ಮೇಲೆರಡು ಅಧಿಕ ಲಕ್ಷಣವುಳ್ಳ। ಮೂರುತಿಯಲೊಪ್ಪುತಿಹ ಮುನಿವರೇಣ್ಯ ॥೨॥

ಆರಾರು ಮೇಲೊಂದು ಅಧಿಕ ಲೆಕ್ಕದ ಗ್ರಂಥ। ಸಾರವನು ರಚಿಸಿ ಸಜ್ಜನರಿಗಿತ್ತು। ಪಾರಮಾರ್ಥಿಕ ಭೇದ ಪಂಚಕವ ಸ್ಥಾಪಿಸಿದ ಉ। ದಾರ ಶ್ರೀ ಕೃಷ್ಣನ ದಾಸರೊಳು ದೊರೆಯ ॥೩॥

ಅಂತೆಯೇ ಇವರು ಮತ್ತೊಂದು ಕೃತಿಯಲ್ಲಿ "ನೀನೇ ವರಗುರು ಮುಖ್ಯ ಪ್ರಾಣ ನಿರಂತರವೂ ನಂಬಿದೆನೊ ನಿಖಿಲ ಗುಣ ಪೂರ್ಣ" ಎಂಬ ಕೃತಿಯಲ್ಲಿ ತಮ್ಮ ಸಾಹಿತ್ಯ ಲಹರಿಯನ್ನು ಕುಣಿಸಿಬಿಟ್ಟಿರುತ್ತಾರೆ.

---

## ಕನ್ನಡಕ ಧರಿಸಿದ ವ್ಯಾಸರಾಯರು

ಕೃಷ್ಣದೇವರಾಯ ರತ್ನಾಭಿಷೇಕಕ್ಕಾಗಿ ವ್ಯಾಸಯೋಗಿಗಳನ್ನು ಮೆರವಣಿಗೆಯಲ್ಲಿ ಕರೆತರಿಸಿದ. ಮೇನೆಯಲ್ಲಿ ಕುಳಿತ ಸ್ವಾಮಿಗಳು ಕನ್ನಡಕ ಧರಿಸಿ ಕೈಯಲ್ಲಿ ಲಿಖಿತ ಪುಸ್ತಕವೊಂದನ್ನು ಹಿಡಿದು ನಿಸ್ಪೃಹರಾಗಿ ಓದುತ್ತಾ ಕುಳಿತ್ತಿದ್ದರು.

( ಕನಕಚತುರಂತಯಾನ ಪರಾರ್ಘ್ಯಮಧ್ಯಂ ಅಧ್ಯಾಸೀನಂ. . . . ಪುಸ್ತಕ ವಿಭಾಗ ರೇಖಾಯೊಂ. . . . ನಿಭೃತನಿಕ್ಷಿಪ್ತಚಕ್ಷುಷಂ. . . . ನಯಯುಗಲೇನ ಸ್ವಚ್ಛತರ ಉಪಲೋಚನ ಗೋಲಕೇನ ಅನುಮಿತವಾರ್ಧಕ ದಶಾತಿಷಯಂ. —ವ್ಯಾಸಯೋಗಿ ಚರಿತೆ

---

ಶ್ರೀವ್ಯಾಸರಾಯರು ಹರಿ ಭಕ್ತರಾದ ಹರಿದಾಸರ ಸಂಗವನ್ನು ಯಾಚಿಸುತ್ತಾ, "ಏನು ಸುಖವೋ ಎಂಥ ಸುಖವೋ ಹರಿಧ್ಯಾನ ಮಾಡುವರ ಸಂಗ। ಹಾಗೂ, ಸಂಗವಾಗಲಿ ಸಾಧು ಸಂಗವಾಗಲಿ ಎಂಬ ಎರಡು ಕೃತಿಗಳಲ್ಲಿ "ತಂಬೂರಿ ಮೀಟುತ್ತಾ ದ್ವಯ। ಅಂಬಕದಿ ಬಾಷ್ಪ ಜಿಂದು ತುಂಬಿ ಆನಂದದಿಂದ। ಸಂಭ್ರಮವಾಹಿಸರ ಸಂಗ॥ ಮತ್ತು, ಗೆಜ್ಜೆ ಕಾಲಲ್ಲಿ ಕಟ್ಟಿ। ಲಜ್ಜೆ ಬಿಟ್ಟು ಹರಿಯ ನಾಮ। ಗರ್ಜನೆ ಮಾಡುತ್ತಾ ಅಘ। ವರ್ಜಿತರಾಗಿಪ್ಪರ ಸಂಗ॥ ಎಂದು ನುಡಿದು ಹರಿದಾಸರ ವೇಷ ಭೂಷಣಾದಿಗಳನ್ನೆಲ್ಲಾ ಚಿತ್ರಿಸಿರುತ್ತಾರೆ. ಇವರು "ಜನುಮ ಜನುಮದಲ್ಲಿ ಕೊಡು ಕಂಡ್ಯಾಹರಿಯೆ" ಎಂಬ ಕೃತಿಯಲ್ಲಿ ತಮಗಿರುವ ದ್ವೈತಮತ ದೀಕ್ಷೆಯನ್ನು ಎತ್ತಿ ನಿರೂಪಿಸಿರುತ್ತಾರೆ. ಶ್ರೀವ್ಯಾಸರಾಯರು ಇಡೀ ಭಾಗವತ ದಶಮ ಸ್ಕಂದವನ್ನೇ ಅನೇಕ ಕೃತಿಗಳಲ್ಲಿ ವಿಚಿತ್ರವಾಗಿ ಚಿತ್ರಿಸಿರುತ್ತಾರೆ. ಏಕೆಂದರೆ ಅವರ

ಸಂಸ್ಥಾನ ಮೂಲ ಪ್ರತೀಕ ಶ್ರೀಕೃಷ್ಣನಾದ ಕಾರಣ.

ಶ್ರೀವ್ಯಾಸರಾಯರು ಸ್ವಾಭಿಮಾನ ಖಂಡನಾ, ತುಳಸಿ ಮಹಾತ್ಮೆ ಹರಿ ದಿನ ಮಹಾತ್ಮೆ, ನಿದ್ರಾ ಹಾಗೂ ಸ್ವಪ್ನ ವಿಚಾರ, ದಶಾವತಾರ ಸ್ತೋತ್ರ, ಹರಿನಾಮ ಸ್ಮರಣೆಯ ಮಹತ್ವಾದಿಗಳ ಬಗ್ಗೆ ಹತ್ತಾರು ಕೃತಿ ರಚಿಸಿ. ಸ್ವಾಭಿಮಾನ ಖಂಡನಾ ಬಗ್ಗೆ "ಬಿಗಿಯದಿರು ಬಿಗಿಯದಿರು ಎಲೋ ಮಾನವ" ಎಂಬ ಕೃತಿಯಲ್ಲಿ ಜೀವನಾದ ವನ ಅತ್ಯಂತ ಅಲ್ಪತ್ವವನ್ನು ಪರಮಾತ್ಮನ ಮಹತ್ವವನ್ನೂ ವಿಚಿತ್ರವಾಗಿ ನಿರೂಪಿಸಿ ರುತ್ತಾರೆ. "ಜಾರತ್ವವನು ಮಾಡಿದಾ ದೋಷಂಗಳಿಗೆಲ್ಲಾ ಗೋಪಿ ಜನ ಜಾರ ಎಂದರೆ ಸಾಲದೆ . . . ಮುಂತಾಗಿ ತಿಳಿಸುತ್ತಾ ಹರಿನಾಮೋಚ್ಚಾರಣಾ ಫಲವನ್ನು ನಿರೂಪಿಸಿದ್ದಾರೆ. "ತಾಯಿ ಎಂಬೆನೆ ನಿನ್ನ ಧ್ರುವನ್ನ ತಾಯಿ ನಿನ್ನಂತೆ ಕಾಯ್ದುವಳೇ– ಇತ್ಯಾದಿ ನಿರೂಪಿಸುತ್ತಾ ಸ್ವಾಮಿ ಪರಮಾತ್ಮನೇ ಅನಿಮಿತ್ತ ಬಂಧು ಎಂದಿದ್ದಾರೆ. ಇವರ "ಓಲಗ ಸುಲುಭವೂ" ಹಾಗೂ "ಅಂತರಂಗದಲ್ಲಿ ಹರಿಯ ಕಾಣದವ ಹುಟ್ಟು ಕುರುಡನೋ" ಕೃತಿಗಳು ನೀತಿ ಬೋಧಕವಾದುವು. ಇವರ "ಎನ್ನ ಬಿಂಬ ಮೂರುತಿಯ ಪೂಜಿಪೆನು ನಾನು" ಕೃತಿ ಉಪಾಸನಾಕ್ರಮ ಬೋಧಕ ವಾದುದು.

ಇವರ "ಆದ್ಯಾಪರಾಧ ಮಿಥ್ಯಾವಾದ, ದ್ವಿತೀಯ ಹರಿ ವಿಸ್ಮರಣೆ, ತೃತೀಯ ನಿಷಿದ್ಧ ಕರ್ಮಾಚರಣೆ ಚತುರ್ಥ ಅಯೋಗ್ಯರಲ್ಲಿಪ್ರದೇಶ" ಈ ಉಗಾಭೋಗ ಅವರ್ಣನೀಯವಾದುದು. ಇಂತಹ ಮಹಾನುಭಾವರನ್ನು ಶ್ರೀಪಾದರಾಜರು, ಶ್ರೀ ವಾದಿರಾಜರು (ಇವರನ್ನು ಪಟ್ಟದಾನೆಗೆ ಹೋಲಿಸಿದ್ದಾರೆ) ಶ್ರೀ ಪುರಂದರದಾಸರು, ಶ್ರೀ ಕನಕದಾಸರು, ಶ್ರೀ ವಿಜಯದಾಸರು. ಶ್ರೀ ಗೋಪಾಲದಾಸರು ಹಾಗೂ ಶ್ರೀ ಜಗನ್ನಾಥದಾಸಾದಿ ಎಲ್ಲಾ ಹರಿದಾಸ ದೀಕ್ಷಾ ಪಂಥದವರೆಲ್ಲಾ ಹತ್ತಾರು ಪದ, ಪದ್ಯ ಸುಳಾದಿಗಳಲ್ಲಿ ವರ್ಣಿಸಿರುತ್ತಾರೆ. ಅಷ್ಟೇಕೆ ಇವರ ಕೊಂಡಾಟ ಶ್ರೀವ್ಯಾಸರಾಯ ಮಠದ ಶ್ರೀ ಶ್ರೀ ವಿದ್ಯಾ ಪ್ರಸನ್ನ ತೀರ್ಥ ಶ್ರೀ ಪಾದಂಗಳವರ ವರೆಗೂ ಸಾಂಪ್ರದಾಯಿಕವಾಗಿ ನಡೆದುಕೊಂಡು ಬಂದಿರುವುದು ಒಂದು ವೈಶಿಷ್ಟತೆ.

**ಅರ್ಪಣಾ.**

ಹೀಗೆ ಜಗತ್ತಿನ ನಾನಾ ತರಂಗದಲ್ಲೂ ತಾವೇ ತಾವಾಗಿ ಗೋಚರಿಸಿ ಸುಜೀವಿಗಳನ್ನು ಉದ್ಧರಿಸಿದ ಜಗದ್ವಿಖ್ಯಾತ ಶ್ರೀವ್ಯಾಸರಾಯರು ನಮ್ಮನ್ನೆಲ್ಲಾ ಅನವರತ ದಿವ್ಯಜ್ಞಾನವಿತ್ತು ಸಾಧನೆಯನ್ನು ಮಾಡಿಸುತ್ತಾ ರಕ್ಷಿಸಿ ಕೊನೆಗೆ ಮೋಕ್ಷಾದಿ ಪುರುಷಾರ್ಥಕರಗತವಾಗಲು ಅನುಗ್ರಹಿಸಲಿ ಎಂದು ಭಕ್ತಿಪೂರ್ವಕ ಪ್ರಾರ್ಥಿಸಿಕೊಳ್ಳೋಣ.

# ಶ್ರೀ ವ್ಯಾಸಚರಿತ್ರೆಯಲ್ಲಿ ವಿಭಿನ್ನದೃಷ್ಟಿ

ವ್ಯಾಸತೀರ್ಥರ ಸಾಕ್ಷಾತ್ ಶಿಷ್ಯರಾದ ಶ್ರೀನಿವಾಸ ತೀರ್ಥರು ಬರೆದ ವ್ಯಾಸ ವಿಜಯ, ವ್ಯಾಸತೀರ್ಥರೊಂದಿಗೆ ನಿಕಟಸಂಪರ್ಕ ಹೊಂದಿದ್ದ ಅದ್ವೈತ ಮತಾನುಯಾಯಿ ಸೋಮನಾಥ ಕವಿಯ 'ವ್ಯಾಸಯೋಗಿ ಚರಿತೆ, ವಿಜಯೀಂದ್ರರ ವ್ಯಾಸ ರಾಜ ಸ್ತೋತ್ರ, ವ್ಯಾಸರಾಜ ಮಠದ ವಿದ್ಯಾರತ್ನಾಕರ ತೀರ್ಥರ ವ್ಯಾಸ ಸ್ತುತಿ ಮತ್ತು ಪುರಂದರರೇ ಮೊದಲಾದ ದಾಸರ ಕೃತಿಗಳು ವ್ಯಾಸತೀರ್ಥರ ಚರಿತ್ರೆಗೆ ಪ್ರಮುಖ ಆಧಾರಗಳು. ಇವುಗಳಲ್ಲಿ ಸೋಮನಾಥ ಕವಿಯ ಕೃತಿಯ ಬಿಟ್ಟರೆ ಉಳಿದುವನ್ನು ಇನ್ನೊಂದು ಗುಂಪಾಗಿ ಮಾಡಬಹುದು. ದಾಸ ಕೃತಿಗಳಿಗೂ ಉಳಿದ ಸಂಸ್ಕೃತದ ಸ್ತೋತ್ರ ಪದ್ಯಗಳಿಗೂ ಸಣ್ಣಪುಟ್ಟ ವ್ಯತ್ಯಾಸವಿದ್ದರೆ ಸೋಮ ನಾಥ ಕವಿಯ ಕೃತಿಯಲ್ಲಿ ಹೆಚ್ಚಿನ ವಿಭಿನ್ನತೆಯನ್ನು ಕಾಣಬಹುದು.

**ಅವತಾರದ ಹಿನ್ನೆಲೆ**— ಭೂಲೋಕದಲ್ಲಿ ಪಾಷಂಡಿಗಳ ಪ್ರಾಬಲ್ಯವನ್ನು ನಾರದರಿಂದ ತಿಳಿದು ಖಿನ್ನರಾದ ಋಷಿ ಮುನಿಗಳಿಗೆ ವೇದವ್ಯಾಸರು ಸಮಾಧಾನ ಹೇಳಿದರು— "ಕಾವೇರಿ ತೀರದ ಬನ್ನೂರು ಗ್ರಾಮದಲ್ಲಿ ಲಕ್ಷ್ಮಿ, ಬಲ್ಲಣ ಸುಮತಿ ದಂಪತಿಗಳಿಂದ ಕುಮಾರನೊಬ್ಬನು ಅವತರಿಸುವನು ಅವನಲ್ಲಿ ಮುಖ್ಯಪ್ರಾಣನೇ ಆವಿಷ್ಟನಾಗಿ ಪುನಃ ಸತ್ಸಿದ್ಧಾಂತವನ್ನು ಪ್ರಚುರ ಪಡಿಸುವನು. (ತಸ್ಮಿಂಶ್ಚ. . . . ಪುನರಪಿ. . . ಭಾವಿತಾವೇಶ ರೂಪಾವತರಣ ಮಂಗಲಃ ಮುಖ್ಯಪ್ರಾಣಃ)

**ವ್ಯಾಸಯೋಗಿ ಚರಿತೆ.**

ದ್ವಾರಕೆಗೆ ಹೋಗಿದ್ದ ನಾರದರು ಪ್ರಾರಬ್ಧಕರ್ಮದಂತೆ ಕಲಿಯುಗದಲ್ಲಿ ತಾವು ಬ್ರಾಹ್ಮಣರಾಗಿ ಹುಟ್ಟುವಂತೆ ವರ ಪಡೆಯುತ್ತಾರೆ. ಹರಿವರ್ಷಖಂಡಕ್ಕೆ ಬಂದು ಈ ವಿಷಯವನ್ನು ಪ್ರಹ್ಲಾದನಿಗೆ ತಿಳಿಸಿ ಅವನನ್ನೂ ಭೂಲೋಕದಲ್ಲಿ ಅವತರಿಸುವಂತೆ ಆದೇಶಿಸುತ್ತಾರೆ. ಹಿಂದೆ ವೃಕೋದರನಿಂದ ಹತನಾದ ಪ್ರಹ್ಲಾದಾವತಾರಿ ಬಾಹ್ಲೀಕ ರಾಜನು ಕಲಿಯುಗದಲ್ಲಿ ಅವತರಿಸಿ ಮಧ್ವಮತವನ್ನು ಉದ್ಧರಿಸುವಂತೆ ವರ ಪಡೆದಿದ್ದ. ಅದರಂತೆ ಪ್ರಹ್ಲಾದ ವ್ಯಾಸತೀರ್ಥನಾಗಿ, ನಾರದರು ಪುರಂದರ ದಾಸರಾಗಿ ಅವತರಿಸಿದರು. ಈ ಹಿನ್ನೆಲೆಯನ್ನು ವಿಜಯ

ದಾಸರು ಸುಳಾದಿಯಲ್ಲಿ ನಿರೂಪಿಸಿದ್ದಾರೆ. ವ್ಯಾಸವಿಜಯದಲ್ಲಿ ವ್ಯಾಸತೀರ್ಥರು ಸಹ್ಲಾದನ ಅಗ್ರಜ ಪ್ರಹ್ಲಾದನೆಂದು ನಿರೂಪಿಸಲಾಗಿದೆ.

**ವ್ಯಾಸತೀರ್ಥರಲ್ಲಿ ಶೇಷನ ಆವೇಶ**— "ಸ್ನಾನಮಾಡಿ ಅಸಂಪ್ರಜ್ಞಾತ ಸಮಾಧಿಯಲ್ಲಿ ಧ್ಯಾನಕ್ಕೆ ಕುಳಿತಿರಲು ಶ್ರೀನಿವಾಸನ ಪ್ರೇರಣೆಯಿಂದ ಸರ್ಪವು ಬಂದು ನಾನಾ ಅಂಗಕ್ಕೆ ಸುತ್ತಲು ಜ್ಞಾನನಿಧಿ ಶ್ರೀಪಾದರಾಯ ಇದನು ತಿಳಿದು ತಾನು ವುತ್ತಲ್ಲಿ ಬಂದು ಜ್ಞಾನ ಪೂರ್ವಕದಿ ಅಹಿಯೊಡನೆ ಮಾತಾಡಿ ನೋಡಿ ನೀನು ಮನುಜನಲ್ಲವೆಂದು" ಎಂದಿದ್ದಾರೆ ಗೋಪಾಲದಾಸರು. ಈ ಘಟನೆಯನ್ನು ವ್ಯಾಸವಿಜಯವೂ ಉಲ್ಲೇಖಿಸಿದೆ. 'ಶೇಷಾವೇಷ ಪ್ರಹ್ಲಾದನವತಾರವೆನಿಸಿದೆ' ಎಂದಿದೆ ಪುರಂದರೋಪನಿಷತ್ತು. 'ಪ್ರಹ್ಲಾದೋಽ ವತತಾರ ಭೂಮಿವಲಯೇ ನಾಗಾಧಿಪಸ್ಯಾಂಶಭೃತ್' ಎನ್ನುತ್ತಾರೆ ವಿದ್ಯಾರತ್ನಾಕರತೀರ್ಥರು.

**ಹೆತ್ತವರು ಯಾರು ?**— ವಿದ್ಯಾರತ್ನಾಕರರು ಮತ್ತು ಸೋಮನಾಥ ಕವಿ ಇವರಿಬ್ಬರೇ ವ್ಯಾಸತೀರ್ಥರ ಪೂರ್ವಾಶ್ರಮದ ತಂದೆಯ ಹೆಸರನ್ನು ಹೇಳಿರುವವರು. ಅದರಲ್ಲೂ ವಿದ್ಯಾರತ್ನಾಕರರು 'ರಾಮಾಚಾರ್ಯ ಸುಧಿಮಣೇಃ ದಯಿತಯಾ' ಎಂದು ಅವರನ್ನು ರಾಮಾಚಾರ್ಯನೆಂದು ಕರೆದರೆ ಸೋಮನಾಥ 'ಲಕ್ಷ್ಮೀ ಬಲ್ಲಣ ಸುಮತಿ ನಾಮ್ನೋಃ ದಂಪತ್ಯೋಃ' ಎಂದು ಅವರಿಗೆ ಬಲ್ಲಣಸುಮತಿ ಎಂದು ನಾಮಕರಣ ಮಾಡಿದ್ದಾನೆ. ಪಾಷ್ಟಿಕ ವಂಶ ಪ್ರದೀಪದಲ್ಲಿ ಹೀಗಿದೆ— "ರಾಮದೇವನ (ವ್ಯಾಸತೀರ್ಥರ ಪೂ. ಆ. ತಾತಂದಿರು) ಕಿರಿಯ ಮಗ ವಲ್ಲಭದೇವ. (ಇವನೇ ವ್ಯಾಸತೀರ್ಥರ ಪೂ. ಆ. ತಂದೆ) ಸೋಮನಾಥ ದೇಶ್ಯ ಮತ್ತು ತದ್ಭವ ಶಬ್ದಗಳನ್ನು ಮಿಶ್ರಮಾಡಿ 'ವಲ್ಲಭ ಸುಮಂತ್ರಿ ಎಂಬುದಕ್ಕೆ ಬಲ್ಲಣಸುಮತಿ ಎಂದಿದ್ದಾನೆ' 'ದಶರಥರಾಮ ಎಂಬಲ್ಲಿ ದಶರಥನ ಪುತ್ರ ರಾಮ ಎಂದರ್ಥಮಾಡುವಂತೆ 'ರಾಮಾಚಾರ್ಯ ಸುಧೀಮಣೇಃ' ಎಂಬಲ್ಲಿಯೂ ರಾಮಾಚಾರ್ಯನ (ರಾಮದೇವನ) ಪುತ್ರನು ಸುಧೀಮಣಿಯು ಎಂದರ್ಥ. ಸುಧೀಮಣಿ ಎಂಬುದರ ತದ್ಭವವೇ ಬಲ್ಲಣಸುಮತಿ' ಹೀಗೆ ಸಮನ್ವಯ ಸಾಧಿಸಿದ್ದಾರೆ ಶ್ರೀ ವೇಣುಗೋಪಾಲದಾಸರು.

ಬಲ್ಲಣ ಸುಮತಿಗೆ ಇಬ್ಬರು ಹೆಂಡಂದಿರು. ಎರಡನೇಯವಳು ಅಕ್ಕಮ್ಮ ಅಥವಾ ಲಕ್ಷ್ಮೀದೇವಿ. ಇವಳೇ ವ್ಯಾಸತೀರ್ಥರ ಪೂ. ಆ. ತಾಯಿ. 'ಪುನರಪಿ ಶ್ರೋತ್ರಿಯಸುತಾಂ ಕಾಂಚಿದಕ್ಕಮ್ಮಾಭಿಧಾಂ ಪರ್ಯಗ್ರಹೀಷಂ' ಎಂದಿದ್ದಾನೆ ಕವಿ ಸೋಮನಾಥ.

ಜನ್ಮದಿನ—ಇತಿಹಾಸ ಸಂಶೋಧಕರಾದ ಸ್ವಾಮಿ ಕಣ್ಣು ಪಿಳ್ಳೆಯವರು ವ್ಯಾಸತೀರ್ಥರ ಅವತಾರ ಕ್ರಿ. ಶ. 22–4–1447 ಎಂದಿದ್ದಾರೆ. ವಿದ್ಯಾರತ್ನಾಕರರು ಶಾ. ಶ. 1369ನೇ ಪ್ರಭವ ಸಂವತ್ಸರದ ವೈಶಾಖ ಶುದ್ಧ ಸಪ್ತಮಿ, ಭಾನುವಾರ

ವೆಂದಿದ್ದಾರೆ. ಆ ಸಂವತ್ಸರದಲ್ಲಿ ವೈಶಾಖ ಅಧಿಕ. ಅಧಿಕ ವೈಶಾಖದಲ್ಲೇ ಜನನ. ನಿಜ ವೈಶಾಖದಲ್ಲಿ ವಾರ ವ್ಯತ್ಯಾಸ ಬರುತ್ತದೆ.

**ಹುಟ್ಟು ಹೇಗೆ ?**— ಶ್ರೀನಿವಾಸತೀರ್ಥರು ಹೇಳುವಂತೆ ಮೃತನಾದ ಪತಿಯೊಂದಿಗೆ ಸಹಗಮನಕ್ಕೆ ನಿಶ್ಚಯಿಸಿದ ಒಬ್ಬ ಹೆಂಗಸು ಬ್ರಹ್ಮಣ್ಯತೀರ್ಥರ ಆಶೀರ್ವಾದ ಪಡೆಯಲು ಹೋದಾಗ ಅವರು 'ಧೀರ್ಘ ಸುಮಂಗಲೀ ಭವ' ಎಂದು ಆಶೀರ್ವದಿಸಿದರು. ಅದರಂತೆ ಸತ್ತ ವ್ಯಕ್ತಿಯನ್ನು ಮಂತ್ರೋದಕದಿಂದ ಬದುಕಿಸಿ ತಮ್ಮ ಆಶೀರ್ವಾದವನ್ನು ಸತ್ಯವಾಗಿಸಿದರು. ಆಮೇಲೆ 'ಸುತೌ ಉಭೌ ತೇ ಭವತಃ' ಎಂಬ ಅವರ ವಚನದಂತೆ ಇಬ್ಬರು ಮಕ್ಕಳಾಗುತ್ತಾರೆ. 'ಪೂರ್ವಂ ಪೂರ್ವಂ ದೇಹಿ ಮಹ್ಯಂ ದ್ವಿತೀಯೇನ ಸುಖಂ ವಸ' ಎಂದು ಗುರುಗಳು ಅಪ್ಪಣೆ ಮಾಡಿದ್ದರಿಂದ ಮೊದಲನೆಯ ಕುಮಾರನೇ ಬ್ರಹ್ಮಣ್ಯರ ಶಿಷ್ಯ ವ್ಯಾಸತೀರ್ಥರು.

ಸೋಮನಾಥ ಹೇಳುತ್ತಾನೆ— ಮಕ್ಕಳಿಲ್ಲದ ಚಿಂತೆಯಿಂದ ಮಲಗಿದ ಅಕ್ಕಮ್ಮನಿಗೆ ಸ್ವಪ್ನದಲ್ಲಿ ವ್ಯಾಸರು ಪ್ರತ್ಯಕ್ಷರಾಗಿ ಬ್ರಹ್ಮಣ್ಯತೀರ್ಥರ ಅನುಗ್ರಹದಿಂದ ಮಕ್ಕಳಾಗುತ್ತದೆ ಎಂದು ಹೇಳಿ ಬಂಗಾರದ ತಟ್ಟೆಯೊಂದನ್ನು ಕೊಟ್ಟು ಅದೃಶ್ಯರಾದರು. ಬ್ರಹ್ಮಣ್ಯತೀರ್ಥರು ಯಜ್ಞವೊಂದನ್ನು ಮಾಡಿಸಿ ಹವಿಃಶೇಷವನ್ನು ಮೂರು ಭಾಗ ಮಾಡಿ ಅಭಿಮಂತ್ರಿಸಿ ಕೊಡುತ್ತಾರೆ. ಇದರಿಂದ ಆ ದಂಪತಿಗಳಿಗೆ ಮೂರು ಮಕ್ಕಳಾಗುತ್ತದೆ. ಎರಡು ಗಂಡು ಒಂದು ಹೆಣ್ಣು, ಮಧ್ವಮುನಿ, ಭೀಮಕ್ಕ, ಯತಿರಾಜ, ಮೂರನೇಯವನೇ ಬ್ರಹ್ಮಣ್ಯತೀರ್ಥರ ಶಿಷ್ಯ.

---

### ವ್ಯಾಸಯತಿಗಳ ಔದಾರ್ಯ

ಸರಸಮುಖೀಪಾಲನು. ಬಸವಾಭಟ್ಟನನ್ನು ವ್ಯಾಸರಾಯರು ವಾದದಲ್ಲಿ ಗೆದ್ದ ಸಂದರ್ಭದಲ್ಲಿ ಸುವರ್ಣ, ಮುತ್ತು, ರತ್ನಗಳಲ್ಲದೆ ಅನೇಕ ಗ್ರಾಮಗಳನ್ನು ಕಾಣಿಕೆಯಾಗಿ ಕೊಟ್ಟನು. ವ್ಯಾಸಯತಿಗಳು ಅವೆಲ್ಲವನ್ನು ಬ್ರಾಹ್ಮಣರಿಗೆ ದಾನ ಮಾಡಿದರು. ಕೃಷ್ಣದೇವರಾಯನು ರತ್ನಾಭಿಷೇಕ ಮಾಡಿದ ಸಂದರ್ಭದಲ್ಲಿ ವ್ಯಾಸರಾಯರು ಐದು ಬೆರಳುಗಳಿಂದಲೂ ಬಾಚಿ ರತ್ನಗಳನ್ನು ವಿಬುಧರಿಗೆ ದಾನ ಮಾಡುತ್ತಿದ್ದರೆ ಅವರ ಐದು ಜನ್ಮಗಳಿಗೂ ಅದು ಸಾಕಾಗುತ್ತವೆಯೆಂದು ಗುರುಗಳ ಬೆರಳುಗಳು ತಿಳಿಸುವಂತಿತ್ತು. ದರ್ಪದಿಂದ ಬಂದಿದ್ದರೂ ವಾದದಲ್ಲಿ ಸೋತ ಬಸವಾಭಟ್ಟನಿಗೂ ವ್ಯಾಸರಾಯರಿಂದ ಪುರಸ್ಕಾರ ದೊರೆಯಿತು.

---

**ಪೋಷಕರು ಯಾರು ?**— ಮಗುವಿಗೆ ಭೂಸ್ಪರ್ಶವಾಗಬಾರದೆಂದು ಪ್ರಸೂತಿ ದಿನದಂದು ಬಂಗಾರದ ಹರಿವಾಣ ಕಳಿಸಿಕೊಡುತ್ತಾರೆ ಬ್ರಹ್ಮಣ್ಯತೀರ್ಥರು. ತಾಯಿ ಸ್ವರ್ಣ ಪಾತ್ರೆಯಲ್ಲಿ ಕೂಸನ್ನಿಟ್ಟು ಶ್ರೀಗಳವರಿಗೆ ಅರ್ಪಿಸುತ್ತಾಳೆ. ಗುರುಗಳು ಆ

ಕೂಡಲೇ ಕಣ್ವ ನದಿಯ ನೀರಿನಲ್ಲಿ ಮಗುವನ್ನು ಶುದ್ಧೀಕರಿಸಿದರು. (ನಿಜಕರಯುಗ ಳಾತ್ ಕ್ಷಾಲಯನ್ ಕಾಣ್ವತೋಯೈಃ) ಮುಂದೆ ಬ್ರಹ್ಮಣ್ಯತೀರ್ಥರೇ ಪೋಷಿಸಿ ಐದನೇ ವರ್ಷಕ್ಕೆ ಉಪನಯನವನ್ನು ಮಾಡಿ ಏಳನೇ ವರ್ಷಕ್ಕೆ ಸನ್ಯಾಸವನ್ನು ಕೊಟ್ಟರು. (ಪಂಚಮಾಬ್ದೇಢ ಬಾಲಸ್ಯ ಚೌಲೋಪನಯನಾದಿಕಂ । ಬ್ರಾಹ್ಮಣ್ಯೈಃ ಕಾರಯಾಮಾಸ ಸಪ್ತಮಾಬ್ದೆ ತತಃ ಸ್ವಯಂ) ಇದು ಶ್ರೀನಿವಾಸತೀರ್ಥರ ಹೇಳಿಕೆ. ವಿದ್ಯಾರತ್ನಾಕರರೂ, ಬ್ರಹ್ಮಣ್ಯತೀರ್ಥ ವಿಜಯ ಮತ್ತು ದಾಸರ ಕೃತಿಗಳೂ ಇದನ್ನೇ ಸಮರ್ಥಿಸುತ್ತವೆ.

ಸೋಮನಾಥನ ನಿರೂಪಣೆ ಬೇರೆ ರೀತಿ— 'ಸಪ್ತಮೇ ವಯಸಿ ಗುರುಣಾ ವಿಧಿವತ್ ಉಪನೀತಃ ಗುರುಕುಲಾನಧ್ಯಾಸೀತ್' ಏಳನೇ ವಯಸ್ಸಿಗೆ ತಂದೆಯಿಂದ ಉಪನೀತನಾಗಿ ನಾಲ್ಕುವರ್ಷ ಗುರುಕುಲವಾಸ. ಮತ್ತೆ ಮನೆಯಲ್ಲೇ ಅಲಂಕಾರ ಕಾವ್ಯಗಳ ಅಭ್ಯಾಸ. ಆಗ ಯತಿರಾಜನಿಗೆ ಹದಿನಾರು ವರ್ಷ ವಯಸ್ಸು. ಗುರುಗಳ ಆದೇಶದಂತೆ ಮಗನನ್ನು ಅವರಿಗೆ ಒಪ್ಪಿಸಿ ಬರುತ್ತಾನೆ ಬಲ್ಲಣಸುಮತಿ. ತನಗೆ ಸನ್ಯಾಸ ಕೊಡುವ ಗುರುಗಳ ಇಂಗಿತವನ್ನರಿತ ಯತಿರಾಜ ತಿಳಿಯದಂತೆ ಒಂದು ಮಧ್ಯಾಹ್ನ ಮನೆಯದಾರಿ ಹಿಡಿದ. ಮಾರ್ಗದಲ್ಲಿ ದಣಿದು ಆಲದ ಮರದ ಕೆಳಗೆ ನಿದ್ದೆ ಹೋದಾಗ ಸ್ವಪ್ನದಲ್ಲಿ ಗರುಡಾರೂಢ ಲಕ್ಷ್ಮೀನಾರಾಯಣನು ಕಾಣಿಸಿ ಯತಿ ರಾಜನ ಅವತಾರ ಪ್ರಯೋಜನವನ್ನು ಜ್ಞಾಪಿಸುತ್ತಾನೆ. (ಬೋಧಿತ ನಿಜಾವತಾರ ಕರಣೀಯಃ) ಕಾರ್ಯಾಂತರಕ್ಕೆ ಹೊರ ಹೋದವನಂತೆ ನಟಿಸಿ ಮತ್ತೆ ಮಠಕ್ಕೆ ಬಂದ ಯತಿರಾಜ. ಗುರುಗಳೂ ಸುಮ್ಮನಿದ್ದರು. ಪ್ರಸಂಗ ಬಂದಾಗಲೆಲ್ಲಾ ಆಶ್ರಮಾಂ ತರ ತಾರತಮ್ಯವನ್ನು ವಿವರಿಸುತ್ತಿದ್ದರು. ಒಂದು ದಿನ ತಮ್ಮ ಅಭಿಪ್ರಾಯ ತಿಳಿಸಿ ದರು. (ಸಾನುನಯಂ ವಾಚಾ ಶಿಷ್ಯಭಾವಂ ಯಾಚಮಾನಃ) ಹುಡುಗ ಒಪ್ಪಿದ. ಗುರುಗಳು ಯತ್ಯಾಶ್ರಮವಿತ್ತು ವ್ಯಾಸತೀರ್ಥರೆಂದು ನಾಮಕರಣ ಮಾಡಿದರು.

**ವಿದ್ಯಾಭ್ಯಾಸ**— ಆಶ್ರಮವಾದ ಕೆಲಸಮಯದಲ್ಲೇ ಬ್ರಹ್ಮಣ್ಯತೀರ್ಥರು ಶಿಷ್ಯ ನನ್ನು ಶ್ರೀಪಾದರಾಜರ ಬಳಿ ವಿದ್ಯಾಭ್ಯಾಸಕ್ಕಾಗಿ ಕಳಿಸಿಕೊಡುತ್ತಾರೆ. ಅಲ್ಲಿ ಹನ್ನೆ ರಡು ವರ್ಷ ವಿದ್ಯಾಭ್ಯಾಸ ನಡೆಯುತ್ತದೆ. (ಅಧೀತ್ಯ ತತ್ರ ದ್ವಿಡಷಬ್ಧಕಾಲಂ) ತಮ್ಮ 20ನೇ ವಯಸ್ಸಿನಲ್ಲಿ ಗುರುಗಳೊಂದಿಗೆ ಪಂಡರಪುರಕ್ಕೆ ಬಂದು ಸ್ವಪ್ನ ಸೂಚ ನೆಯಂತೆ ಭೀಮರಥೀ ನದೀ ತೀರದಲಿ ಶ್ರೀಕೃಷ್ಣ ವಿಗ್ರಹ ಪಡೆದು ಗುರುಗಳಿಗೆ ಅರ್ಪಿಸಿದರು. (ಕೃಷ್ಣಂ ಪ್ರಾಪ್ಯ ಕೃತಾರ್ಥೋಽಭೂತ್ ಸಮರ್ಪ್ಯ ಸ್ವಗುರೌ ತಥಾ) ಬ್ರಹ್ಮಣ್ಯತೀರ್ಥ ವಿಜಯದಲ್ಲಿ ಹೇಳುವಂತೆ ಈ ಪ್ರತಿಮೆ ಗುರುಗಳಿಗೆ ದೊರೆತಿದ್ದು. ಅಲ್ಲದೆ ರುಕ್ಮಿಣೀ ಸತ್ಯಭಾಮಾ ಸಮೇತವಾದ ಈ ಪ್ರತಿಮೆ ಸತ್ಯಭಾಮೆಯಿಂದ ಅರ್ಚಿ ತವೆಂದು ಶ್ರೀನಿವಾಸತೀರ್ಥರು ಹೇಳಿದರೆ ಚಂದ್ರಿಕಾ ಪ್ರಕಾಶ ಪ್ರಸರದಲ್ಲಿ ಈ ಪ್ರತಿಮೆ 'ನೀಲಾರ್ಚ್ಯ ಮೂಲಗೋಪಾಲಕೃಷ್ಣ..' ಎನ್ನಲಾಗಿದೆ. (ಈ ಸಂಚಿಕೆಯ

30 ಪುಟದಲ್ಲಿ ಕೃಷ್ಣಪ್ರತಿಮೆಯು ಶ್ರೀಪಾದರಾಜರಿಗೆ ದೊರೆಯಿತೆಂದು ವ್ಯಾಸ ವಿಜಯದ ನಿರೂಪಣೆಯಾಗಿ ತಪ್ಪಾಗಿ ಮುದ್ರಿತವಾಗಿದೆ. ದಯವಿಟ್ಟು ಗಮನಿಸಿ.)

ಆಗಾಗಲೇ ಪಂಡಿತ ವಿಜಯವನ್ನು ಸಂಪಾದಿಸಿದ ವ್ಯಾಸಮುನಿಗಳು ಕಂಚಿಯಿಂದ ಶ್ರೀಪಾದರಾಯರಲ್ಲಿ ಬಂದರು. ಕವಿ ಹೇಳುವಂತೆ 'ನಿಕ್ಷೇಪ ಭಾಜನಮಿವ ಮಧ್ವಮುನಿರಹಸ್ಯಸ್ಯ' ಆಗಿದ್ದರು ಶ್ರೀಪಾದರಾಜರು. ಅಲ್ಲಿ ಮತ್ತೆ ಉನ್ನತ ವ್ಯಾಸಂಗ ನಡೆಸುತ್ತಾ, ಬಹುಕಾಲವಿದ್ದು ಅಲ್ಲಿಂದ ವಿದ್ಯಾಗುರುಗಳ ಆಜ್ಞೆಯಂತೆ ಸಾಳ್ವರಾಜನ ಆಸ್ಥಾನಕ್ಕೆ ಬಂದರು. ಎಂದಿದ್ದಾನೆ ಸೋಮನಾಥ ಕವಿ.

**ಕಂಚಿಯಲ್ಲಿ ವ್ಯಾಸಮುನಿಗಳು**—ದೇಶ ಸಂಚಾರ ಮಾಡುತ್ತಾ, ವ್ಯಾಸತೀರ್ಥರು ಕಂಚಿಗೆ ಬಂದು ವಾದದಲ್ಲಿ ಅಲ್ಲಿನ ಪಂಡಿತರನ್ನು ಗೆದ್ದರು. ಅವರ ಪ್ರತಿಭೆಗೆ ಅಸೂಯೆಗೊಂಡ ಬ್ರಾಹ್ಮಣನೊಬ್ಬ ವಿಷಪ್ರಯೋಗ ಮಾಡಿದಾಗ ಗರುಡಧ್ವಜನು ಸ್ವಪ್ನದಲ್ಲಿ ಕಾಣಿಸಿ ಮಹೌಷಧಿಯೊಂದನ್ನು ನಿರ್ದೇಶಿಸುತ್ತಾನೆ. ಅದರ ಸೇವನೆಯಿಂದ ಹಿಂದಿಗಿಂತಲೂ ಹೆಚ್ಚು ಶೋಭೆಯನ್ನು ಪಡೆದರು. ಎಂದಿದೆ ವ್ಯಾಸಯೋಗಿ ಚರಿತೆಯಲ್ಲಿ.

ಕಂಚಿಯಲ್ಲಿ ಶ್ರೀರಂಗನಾಥನ ದರ್ಶನಕ್ಕೆ ಹೋದಾಗ ಶೈವರು ಜಂಬುಕೇಶ್ವರನಿಂದ ಅಧಿಷ್ಠಿತವಾದ ಆ ಕ್ಷೇತ್ರ ತಮ್ಮದೆಂದು ಹೇಳಿ ವ್ಯಾಸತೀರ್ಥರನ್ನು ತಡೆದರು. ಆಗ ಶ್ರೀಗಳವರು ಅಲ್ಲಿನ ಬ್ರಾಹ್ಮಣರ ಸಮ್ಮತಿಯಂತೆ ಉಸಿರು ಬಿಗಿಹಿಡಿದು ಅಲ್ಲಿಂದ ಜಂಬುಕೇಶ್ವರದವರೆಗೆ ಓಡಿ ಅಲ್ಲಿ ಉಸಿರು ಬಿಟ್ಟರು. ಇದರಿಂದ ಅಲ್ಲಿವರೆಗಿನ ಸ್ಥಾನ ವೈಷ್ಣವ ಕ್ಷೇತ್ರವಾಯಿತು. (ಶ್ವಾಸಂ ನಿರುಧ್ಯ ಯತಿರಾಡ್ ಸಹಸಾ ಅಧಾವತ್ ॥) ಎಂದು ವ್ಯಾಸವಿಜಯದಲ್ಲಿದೆ.

---

## ವ್ಯಾಸತೀರ್ಥರಿಂದಾದ ಬದಲಾವಣೆ

ಬಹುಕಾಲಂದಿಂದಲೂ ಮಿಥ್ಯಾ, ಮಿಥ್ಯಾ ಎಂಬುದಾಗಿ ಆರೋಪಿತವಾಗಿದ್ದ ಪ್ರಪಂಚವು ಮಿಥ್ಯಾರೋಪದಿಂದ ಬಿಡುಗಡೆ ಹೊಂದಿತು. ಯಾಗಗಳ ಪರಮಾರ್ಥ ಪ್ರಯೋಜವು ರಂಭಾ ಕುಚಾಲಿಂಗನಾದಿ ಸ್ವರ್ಗ ಸೌಖ್ಯಗಳೇ ಎಂಬುದಾಗಿ ಯಜ್ಞಯಾಗಾದಿಗಳಿಗೆ ಸಂಭವಿಸಿದ್ದ ವ್ಯಾವಹಾರಿಕ ಫಲರೋಗವು ಪರಿಹಾರವಾಯಿತು. ಜೀವಾತ್ಮಪರಮಾತ್ಮ ಭೇದವು ಸ್ಥಾಪಿತವಾಯಿತು. ಜನಗಳಲ್ಲಿ ವಿಚಾರ ಶಕ್ತಿಯು ಉಲ್ಬಣವಾಗಿ ದೇವತಾತಾರತಮ್ಯ ಪೂರ್ವಕ ಹರಿ ಸರ್ವೋತ್ತಮತ್ವ ಜ್ಞಾನದಲ್ಲಿ ಅವರ ಬುದ್ಧಿಯು ಆಸಕ್ತವಾಯಿತು.

ವ್ಯಾಸಯೋಗಿ ಚರಿತೆ

---

**ವಾದಿವಿಜಯ**— ನರಸನಾಯಕನ ಪ್ರಾರ್ಥನೆಯಂತೆ ವಿಜಯನಗರಕ್ಕೆ ವಿಜಯಗೈದರು. ಅಲ್ಲಿ ಕಳಿಂಗ ದೇಶದ ಪಂಡಿತರು ಬಸವಾಭಟ್ಟನನ್ನು ಮುಂದು ಮಾಡಿ ವಾದಕ್ಕೆ ಬಂದರು, ಒಂದು ತಿಂಗಳ ವಾದದಲ್ಲಿ ಗೆಲುವು ವ್ಯಾಸತೀರ್ಥರದಾಯಿತು. ನರಸಮಹೀಪಾಲ ಅನೇಕ ಅಗ್ರಹಾರಗಳನ್ನು ಸ್ವಾಮಿಗಳಿಗೆ ದಾನಮಾಡಿದ. (ಈ ಸಂದರ್ಭದಲ್ಲಿ ಬಸವಾಭಟ್ಟ ತಾನು ಪೂಜಿಸುತ್ತಿದ್ದ ಶಿವಲಿಂಗವನ್ನು ವ್ಯಾಸತೀರ್ಥರಿಗೆ ಕೊಟ್ಟ. ಇಂದಿಗೂ ಅದು ಮಠದಲ್ಲಿ ಶಿವರಾತ್ರಿಯಂದು ವಿಶೇಷ ಪೂಜೆ ಪಡೆಯುತ್ತದೆ.) ಮತ್ತೆ ಕೃಷ್ಣದೇವರಾಯನ ಕಾಲದಲ್ಲಿ ಕಳಿಂಗಾಧಿಪತಿ ವಿದ್ಯಾಧರಪಾತ್ರ ದುಷ್ಟರ ಪ್ರೇರಣೆಯಂತೆ ವ್ಯಾಸರಾಯರ ಪರಾಮರ್ಶೆಗಾಗಿ ಗ್ರಂಥವೊಂದನ್ನು ಕಳಿಸಿಕೊಡುತ್ತಾನೆ. ವ್ಯಾಸತೀರ್ಥರು ಕೂಡಲೇ ಅದಕ್ಕೆ ಖಂಡನೆಯನ್ನು ಬರೆದು ಕಳಿಸುತ್ತಾರೆ. ಬೆರಗಾದ ರಾಜ ಅವರಿಗೆ ರತ್ನಾಭಿಷೇಕ ಮಾಡುತ್ತಾನೆ, ಎನ್ನುತ್ತಾನೆ ಸೋಮನಾಥ ಕವಿ.

ಕಾಶಿ ಗದಾಧರಮಿಶ್ರನ ಸೋಲಿಸಿ । ದಾಸನ ಮಾಡಿಕೊಂಡ ಧಾರುಣಿಯೊಳಗೆ ಕಾಶಿಮಿಶ್ರ ಪಕ್ಷಧರ ವಾಜಪೇಯ ನಾ । ರಸಿಂಹ ಲಿಂಗಣ್ಣಮಿಶ್ರ ಮೊದಲಾದ ವಿ । ದ್ವಾಂಸರ ನೂರೆಂಟು ಮಂದಿ ಬರಲವರ । ಜೈಸಿದೆ ಜಯ ಪತ್ರಿಕೆಯ ಕೊಂಡು ಮೆರೆದೆ । ವಾಸುದೇವ ಗೋಪಾಲಕೃಷ್ಣನಿಗೆ ವಿ । ಭೂಷಣವನು ಮಾಡಿ ಹಾಕಿಸಿದೆ ॥ ಎಂದು ಹೇಳುತ್ತಾರೆ ಪುರಂದರದಾಸರು.

**ವ್ಯಾಸ ಸಮುದ್ರ**— ಕಂದುಕ ಗ್ರಾಮದಲ್ಲಿ (ಕುಂದಕೂರು) ಪಾಪಘ್ನೀನದಿಗೆ ಅಡ್ಡವಾಗಿ ಕೆರೆಯೊಂದನ್ನು ಕಟ್ಟಿಸಿದರು ವ್ಯಾಸಮುನಿಗಳು. ಆಗ ಅಲ್ಲಿ ಬಂದು ಮಂತ್ರೋಪದೇಶವನ್ನು ಬೇಡಿದ ಬ್ರಾಹ್ಮಣನಿಗೆ (ಕಶ್ಚಿತ್ ದ್ವಿಜಃ ಸಮಾಗತ್ಯ— ಎಂದಿದೆ ವ್ಯಾಸವಿಜಯದಲ್ಲಿ. ವಿದ್ಯಾರತ್ನಾಕರರು 'ಶೂದ್ರಂ ಕಂಚನ' ಎಂದಿದ್ದಾರೆ. ಅವನೇ ಕನಕನೆಂದು ಪ್ರತೀತಿ) 'ತದಾಯಾಹಿ ಮಾಹಿಷ ತ್ವಂ' ಎಂದರು. ಮುಗ್ಧ ಬ್ರಾಹ್ಮಣ 'ಆಯಾಹಿ ಮಹಿಷ' ಎಂದು ಜಪಿಸಿದ, ಪ್ರತ್ಯಕ್ಷನಾದ ಯಮನ ವಾಹನ ಕೋಣ ವ್ಯಾಸಮುನಿಗಳ ಅಪೇಕ್ಷೆಯಂತೆ ನೀರಿನ ಕೋಡಿಗೆ ಅಡ್ಡವಾಗಿದ್ದ ಬಂಡೆಯನ್ನು ತೆಗೆಯುತ್ತದೆ, ಇದು ವ್ಯಾಸವಿಜಯದ ನಿರೂಪಣೆ.

ಈ ಕೆರೆಯ ನಿರ್ಮಾಣವನ್ನು ಸೋಮನಾಥನು ಹೇಳುತ್ತಾ 'ಆ ಕೆರೆಯ ದಂಡೆಯ ಮರದಡಿಯಲ್ಲಿ ಯತಿ ಸಮೂಹದಿಂದ ನ್ಯಾಯಾಮೃತಾದಿ ಗ್ರಂಥಗಳ ಪಾಠ ನಡೆಯುತ್ತಿದ್ದರೆ ಮರದಲ್ಲಿದ್ದ ಶುಕಮಾಣವಕರು ಉಚ್ಚರಿಸುತ್ತಲಿದ್ದರು' ಎಂದಿದ್ದಾನೆ.

**ಕುಹುಯೋಗ**— ಆಗ ವ್ಯಾಸತೀರ್ಥರು ತುಂಗೆಯ ತೀರದಲ್ಲಿ ತಪಸ್ಸಿನಲ್ಲಿದ್ದರು. ದೈವಜ್ಞರ ಸಲಹೆಯಂತೆ ಕುಹುಯೋಗ ನಿಮಿತ್ತ ಕೃಷ್ಣದೇವರಾಯ ಸಿಂಹಾ

ಸನ ತ್ಯಜಸಿದ್ದ, ಆನೆಯ ಕೈಯಲ್ಲಿ ಹಾರವನ್ನು ಕೊಟ್ಟು ಅದು ಯಾರ ಕೊರಳಲ್ಲಿ ತೊಡರಿಸುವುದೋ ಅವರನ್ನೇ ಸಾಮ್ರಾಜ್ಯದಲ್ಲಿ ಕೂಡಿಸುವುದೆಂದು ಮಂತ್ರಿಗಳು ನಿಶ್ಚೈಸಿದರು. ಆನೆ ವಿರಕ್ತ ವ್ಯಾಸಮುನಿಗಳನ್ನು ಆರಿಸಿತು. (ದೃಷ್ಟ್ವಾ ತತ್ರ ಯತಿಂ ತಸ್ಯ ಗಲೇ ಮಾಲಾಂ ನ್ಯಯೋಜಯತ್) ಗುರುಗಳು ಪದವಿಯನ್ನು ನಿರಾಕರಿಸಿದರು. ಮತ್ತೊಮ್ಮೆ ಆನೆಯ ನಿರ್ಣಯ ಕೇಳಿದಾಗಲೂ ಅದು ಅವರನ್ನೇ ಆರಿಸಿತು. ಕೊನೆಯ ಬಾರಿ ಶ್ರೀಗಳವರು ಗುಹೆಯಲ್ಲಿ ಕುಳಿತರು. ಅಲ್ಲಿಗೂ ಬಂದು ಆನೆ ಹೊರಗೆ ಘೀಳಿಟ್ಟಿತು, ಗುರುಗಳು ಒಪ್ಪಿದರು. ರತ್ನಸಿಂಹಾಸನಾಧೀಶರಾದರು. ರಾಜ ಭಂಡಾರದಿಂದ ರತ್ನಗರ್ಭ ಸಾಲಿಗ್ರಾಮವೇ ಮೊದಲಾದ 64 ವಸ್ತುಗಳನ್ನು ಆಗ ತೆಗೆದುಕೊಂಡರು ಶ್ರೀಗಳು. (ಏ ವಂ ಕೃತ್ವಾ ರಾಜ್ಯರಕ್ಷಾಂ ಕುಹುಯೋಗೇ ಗತೇ ಸತಿ । ಚತುಃ ಷಷ್ಟಿಂ ರತ್ನಗರ್ಭ ಶಾಲಿಗ್ರಾಮಂ...) ಎಂದಿದೆ ವ್ಯಾಸವಿಜಯದಲ್ಲಿ. ಕವಿ ಸೋಮನಾಥ ಇದರ ಪ್ರಸ್ತಾಪ ಮಾಡಿಲ್ಲ.

ತಿಮ್ಮರಸನ ಸಲಹೆಯಂತೆ ಕೃಷ್ಣದೇವರಾಯನು ಸಿಂಹಾಸನದಲ್ಲಿ ವ್ಯಾಸತೀರ್ಥರನ್ನು ಕೂಡಿಸಲು ತೀರ್ಮಾನಿಸಿ ಗುರುಗಳಿಗೆ ತನ್ನ ಅಭಿಮತ ತಿಳಿಸಿದ, ವ್ಯಾಸತೀರ್ಥರು– 'ಏಕಾದಸ್ಥೇ ಗೋವಿಂದೇ ಸರ್ವೇಪ್ಯೇಕಾದಶೇ ಸ್ಥಿತಾಃ' ಅಂದರೆ ಶ್ರೀಹರಿಯು ಏಕಾದಶ ಇಂದ್ರಿಯಗಳಲ್ಲೂ ಇರುವಾಗ ಎಲ್ಲಾ ಗ್ರಹಗಳೂ ಏಕಾದಶ ಸ್ಥಾನದಲ್ಲಿದ್ದು ಶುಭ ಉಂಟುಮಾಡುತ್ತವೆ ಎಂದರು. ಒತ್ತಾಯಕ್ಕೆ ಮಣಿದು ಕುಹುಯೋಗದ ಮೂರು ಮುಕ್ಕಾಲು ಘಳಿಗೆ ರಾಜ್ಯವಾಳಿದರು, ಎಂದು ಹೇಳಲಾಗಿದೆ ಶ್ರೀ ಕೊರಟಿ ಶ್ರೀನಿವಾಸರಾಯರ "ಶ್ರೀವ್ಯಾಸರಾಯರು" ಪುಸ್ತಕದಲ್ಲಿ. ವಾದಿರಾಜರು ವ್ಯಾಸಮುಷ್ಟಿಯನ್ನು ಕೊಂಡು ಹೋದ ಘಟನೆಯನ್ನು ಶ್ರೀನಿವಾಸ ತೀರ್ಥರು ಉಲ್ಲೇಖಿಸಿದ್ದಾರೆ.

**ಒಲಿದು ಬಂದ ಕೃಷ್ಣ**— ವ್ಯಾಸಮುನಿಗಳು ಮೂರು ದಿನ ಉಪವಾಸ ವ್ರತವನ್ನಾಚರಿಸಿ ಶ್ರೀಕೃಷ್ಣಧ್ಯಾನಪರರಾದರು. ಮೆಚ್ಚಿದ ಶ್ರೀಕೃಷ್ಣ ನವನೀತಪಾಣಿಯಾಗಿ ಕಿಂಕಿಣಿಯ ಝೇಂಕಾರ ಮಾಡುತ್ತಾ ವಿಲಾಸವಾಡಿ ರಹಸ್ಯದಲ್ಲಿ ಅನುಗ್ರಹಿಸಿದನು. —ವ್ಯಾಸಯೋಗಿ ಚರಿತೆ.

ಅಂದು ಶ್ರೀಪಾದರಾಯರು ತೈಲಾಭ್ಯಂಗ ಮಾಡಬೇಕಿತ್ತು. ವ್ಯಾಸತೀರ್ಥರಿಗೆ ನಿರ್ಮಾಲ್ಯ ವಿಸರ್ಜನೆ ಮಾಡಲು ಹೇಳಿದರು. ಶಿಷ್ಯ ಪೂಜೆಗೆ ಕುಳಿತರು. ಧ್ಯಾನ ಮಗ್ನರಾದರು. ಸುವರ್ಣ ಪೆಟ್ಟಿಗೆಯ ಮಧ್ಯದಲ್ಲಿದ್ದ ಶ್ರೀಕೃಷ್ಣ ವೇಣುಗಾನ ಮಾಡುತ್ತಾ ನರ್ತಿಸತೊಡಗಿದ, ಗುರುಗಳು ವೀಣೆ ಮೀಟುತ್ತಾ ಹಾಡಿದರು. ಎಡಗಾಲನ್ನು ಬಲಗಾಲ ಮೇಲಿಟ್ಟು ನಿಲ್ಲುವಂತೆ ಪ್ರಾರ್ಥಿಸಿದರು. (ಇದು ನೃತ್ಯ ಭಂಗಿಯಲ್ಲ) ಇಂದಿಗೂ ಶ್ರೀಮಠದ ಪ್ರತಿಮೆಯಲ್ಲಿ ಇದೇ ಭಂಗಿಯನ್ನು ಕಾಣಬಹುದು. –ವ್ಯಾಸವಿಜಯ,

ಕೃಷ್ಣನನ್ನು ಕಂಡು ವ್ಯಾಸತೀರ್ಥರು ಸಾಲಿಗ್ರಾಮವನ್ನೇ ತಾಳವನ್ನಾಗಿ ಮಾಡಿದರು. ಸಾಲಿಗ್ರಾಮ ಒಡೆಯಿತು. ಶಿಷ್ಯರು ಶ್ರೀಪಾದರಾಜರಿಗೆ ತಿಳಿಸಿದರು. ಗುರುಗಳು ಶಿಷ್ಯರನ್ನು ಅಭಿನಂದಿಸಿ ಆ ಪ್ರತಿಮೆಯನ್ನು ಅವನಿಗೆ ಒಪ್ಪಿಸಿದರು ಎಂಬ ಕಥೆಯೂ ಪ್ರಚಲಿತವಿದೆ.

ಇವು ಚರಿತ್ರೆಗ್ರಂಥಗಳಲ್ಲಿ ಬರುವ ಮುಖ್ಯಾಂಶಗಳು

000

---

## ರಾಜಗುರು ಶ್ರೀವ್ಯಾಸರಾಯ

ಕ್ರಿ. ಶ. 1486 ರಿಂದ 1538 ರವರೆಗೂ ವಿಜಯನಗರದ ಆಳರಸರಿಗೆ ಪೂಜ್ಯ ಗುರುಗಳಾಗಿದ್ದರು ಶ್ರೀವ್ಯಾಸತೀರ್ಥರು. ಶ್ರೀಪಾದರಾಜರು ಆದೇಶಿಸಿದಂತೆ ಮೊದಲನೆಯ ಸಾಳ್ವ ನರಸಿಂಹನಿಗೆ ಕಾರ್ತವೀರ್ಯಾರ್ಜುನನಿಗೆ ದತ್ತಾತ್ರೇಯರಂತೆ ಆಗಿದ್ದರು. ತಿಮ್ಮರಾಯ ಅರಸನಿಗೆ ಇಂದ್ರನಿಗೆ ಬೃಹಸ್ಪತಿಯಂತಿದ್ದರು. ಮುಂದಿನ ದೊರೆ ನರಸನಾಯಕ, ಪಾಂಡವರು ವೇದವ್ಯಾಸರಂತೆ ಅವನಿಗೆ ಮಾನ್ಯರಾಗಿದ್ದರು ಗುರುಗಳು. ಸೋಮನಾಥನ ಮಾತಿನಲ್ಲಿ "ವ್ಯತ್ಯಸ್ತವಾಸಭೂನಾಥಪತೌ ಅಭೂತಾಂ' ಮುಂದಿನ ವೀರನರಸಿಂಹ ಅಜನಿಗಿಂತ ಹೆಚ್ಚಾಗಿ ದಶರಥನು ವಸಿಷ್ಠನನ್ನು ಗೌರವಿಸಿದಂತೆ ತಂದೆಗಿಂತಲೂ ಹೆಚ್ಚು ಗುರುಗಳನ್ನು ಗೌರವಿಸುತ್ತಿದ್ದ. ಕೃಷ್ಣದೇವರಾಯನಿಗಂತೂ ಕುಲದೇವತೆಯೇ ಎನಿಸಿದ್ದರು. ತ್ರಿಸಂಧ್ಯೆಯಲ್ಲಿ ಗುರು ವ್ಯಾಸಮುನಿಗಳನ್ನು ಕಂಡು ನಮಸ್ಕರಿಸುತ್ತಿದ್ದ. ಆದರೆ ವ್ಯಾಸತೀರ್ಥರು ಪ್ರಾಯಃ ರಾಜಕೀಯದಲ್ಲಿ ಭಾಗವಹಿಸುತ್ತಿರಲಿಲ್ಲ. ನರಸಿಂಹನು ಅಧಿಕಾರಕ್ಕೆ ಬಂದ ಕೇವಲ ಎರಡು ದಶಕಗಳಲ್ಲೇ ಮಂತ್ರಿ ನರಸನಾಯಕ ಪಟ್ಟಕ್ಕೆ ಬಂದ ಇಲ್ಲಿಂದ ಸಾಳ್ವವಂಶದ ಆಳ್ವಿಕೆ ಕೊನೆಗೊಂಡು ತುಳುವಂಶದ ಆಳ್ವಿಕೆ ಆರಂಭವಾಯಿತು. ಆಗ ಸಾಳ್ವ ಅರಸನ್ನೊಬ್ಬನ ಕೊಲೆ ನಡೆಯಿತು ಎನ್ನಲಾಗುತ್ತದೆ. ಮುಂದೆ ಕೃಷ್ಣದೇವರಾಯನ ಕಣ್ಣು ಕೀಳುವ ಯತ್ನವೂ ನಡೆಯಿತಂತೆ. ಆದರೆ ಈ ಎಲ್ಲಾ ಅರಸರಿಗೂ ವ್ಯಾಸತೀರ್ಥರು ಗುರುಗಳಾಗಿ ಬಹುಮಾನಪಾತ್ರರಾಗಿಯೇ ಇದ್ದರು.

---

## ಇವರು ವ್ಯಾಸರಾಯರೆ ?



ಹೌದು. ಕೃಷ್ಣದೇವರಾಯ ರತ್ನಾಭಿಷೇಕಕ್ಕಾಗಿ ಬರಮಾಡಿಸಿಕೊಂಡಾಗ ಶ್ರೀ ವ್ಯಾಸರಾಯರು ಧರಿಸಿದ ಉಪನೇತ್ರ [sic: ಉಪಲೋಚನ] ಅವರ ವಾರ್ಧಕ್ಯವನ್ನು ಸೂಚಿಸುತ್ತಿತ್ತು ಎಂದಿದ್ದಾನೆ ಕವಿ ಸೋಮನಾಥ.

# ಶ್ರೀವ್ಯಾಸತ್ರಯ

ಶ್ರಿ ವ್ಯಾಸತೀರ್ಥರ ಗ್ರಂಥಗಳಲ್ಲಿ ನ್ಯಾಯಾಮೃತ, ತರ್ಕತಾಂಡವ ಮತ್ತು ತಾತ್ಪರ್ಯ ಚಂದ್ರಿಕಾ ಇವು ಮೂರು ಮೇರು ಕೃತಿಗಳು. ವ್ಯಾಸರಾಜರು ತಮ್ಮ ಪದ ಪದ್ಮರತರಾದ ಭಕ್ತರಿಗೆ ಕೊಟ್ಟ ಸತ್ಸಿದ್ಧಾಂತ ರಕ್ಷಣೆಯ ವಜ್ರಬಂಡೆಗಳು ಎಂದಿದ್ದಾರೆ ವಿಜಯೀಂದ್ರರು. ಸೋಮನಾಥ ಕವಿಯ ಮಾತಿನಂತೆ ಇವು ತತ್ವನಿಧಿ ನಿಕುರಂಬ. ಮಧ್ವಶಾಸ್ತ್ರವೆಂಬ ವೃಂದಾವನದಲ್ಲಿ ವಿಹರಿಸುವ ವ್ಯಾಸಮುನಿಯೆಂಬ ಗೋಪಿಯು ಮಂದಾರಮಂಜರಿಯನ್ನು ತುರುಬಲ್ಲಿ ಮುಡಿದು. ನ್ಯಾಯಾಮೃತವೆಂಬ ಅಧರಾಮೃತದಿಂದಲೂ ತಾತ್ಪರ್ಯ ಚಂದ್ರಿಕೆಯೆಂಬ ಮಂದಹಾಸದಿಂದಲೂ ವಿರಾಜಿಸುತ್ತಾ ತರ್ಕತಾಂಡವವನ್ನಾಡುತ್ತಾ ಶ್ರೀಕೃಷ್ಣನನ್ನು ಒಲಿಸಿದಳು ಎನ್ನುತ್ತಾರೆ ಒಬ್ಬ ಟಿಪ್ಪಣಿಕಾರರು.

**ನ್ಯಾಯಾಮೃತ**— ನಾಲ್ಕು ಪರಿಚ್ಛೇದಗಳಾಗಿ ವಿಭಾಗಿಸಲ್ಪಟ್ಟ ಈ ಗ್ರಂಥ ಒಟ್ಟು ಹದಿನಾಲ್ಕು ಪ್ರಕರಣಗಳಿಂದ ಕೂಡಿದೆ. ಮೊದಲನೆಯ ಪರಿಚ್ಛೇದದಲ್ಲಿ ಅದ್ವೈತ ಸಿದ್ಧಾಂತವು ಹೇಳುವ ಪ್ರಪಂಚ ಮಿಥ್ಯಾತ್ವದ ಐದು ಪರಿಷ್ಕೃತ ಅರ್ಥಗಳನ್ನು ನಿರಾಕರಿಸಿ ಶ್ರುತಿ ಪುರಾಣಗಳಿಂದ ಪ್ರಪಂಚ ಸತ್ಯತ್ವವನ್ನು ಪ್ರತಿಪಾದಿಸಲಾಗಿದೆ. ಹೀಗೆ ಸತ್ಯವಾದ ಈ ಜಗತ್ತನ್ನು ಸೃಷ್ಟಿಮಾಡುವುದರಿಂದಲೇ ಬ್ರಹ್ಮ ಸರ್ವಜ್ಞ. ಸರ್ವಶಕ್ತನಾಗಿದ್ದಾನೆ ಎಂದು ಅವನಿಗೆ ಗುಣಪೂರ್ಣತ್ವವನ್ನು ಸಾಧಿಸಿದ್ದಾರೆ.

ಎರಡನೇ ಪರಿಚ್ಛೇದದಲ್ಲಿ ನಿರ್ದೋಷ ಬ್ರಹ್ಮನು ದೋಷಪೂರ್ಣರಾದ ಜೀವರಿಂದ ಅತ್ಯಂತ ಭಿನ್ನನೆಂದು ಸಮರ್ಥಿಸಿ ಭಗವತ್ಸಾಕ್ಷಾತ್ಕಾರಕ್ಕೆ ಧ್ಯಾನ ಮತ್ತು ಶ್ರವಣಮನನಾದಿಗಳನ್ನು ಕಾರಣವೆಂದು ಸಾಧಿಸಲಾಗಿದೆ.

ಮೂರನೇ ಪರಿಚ್ಛೇದದಲ್ಲಿ ಶ್ರವಣಾದಿಗಳಿಂದ ಉಂಟಾದ ಭಗವತ್ ಸಾಕ್ಷಾತ್ಕಾರದಿಂದ ಭಗವತ್ಪ್ರಸಾದವಾದರೆ ಮೋಕ್ಷವಾಗುವುದೆಂದು ತಿಳಿಸುತ್ತಾರೆ

ನಾಲ್ಕನೇ ಪರಿಚ್ಛೇದದಲ್ಲಿ ಹರಿಪ್ರಸಾದಕ್ಕೆ ಮೋಕ್ಷ ಸಾಧನತ್ವವನ್ನು ಉಪಪಾದಿಸಿ ಮುಕ್ತಿ ಸ್ವರೂಪವನ್ನು ವಿಮರ್ಶಿಸುತ್ತಾರೆ.

ಆರಂಭದಲ್ಲಿ ಈ ಗ್ರಂಥದ ಸಾರ್ಥಕ್ಯವನ್ನು ಗ್ರಂಥಕಾರರೇ ಹೇಳಿದ್ದಾರೆ. "ಭಾಷ್ಯ ಟೀಕಾದಿಗಳಲ್ಲಿ ವಿಕ್ಷಿಪ್ತವಾಗಿ ಹೇಳಿದ ವಿಷಯಗಳನ್ನು ಸಂಗ್ರಹಿಸುವುದು, ಪ್ರಾಚೀನರು ಹೇಳಿದ ಸಿದ್ಧಾಂತದಲ್ಲಿ ಆಕ್ಷೇಪವಿದ್ದರೆ ಪರಿಹರಿಸಿ ಅದನ್ನು ಸಮರ್ಥಿಸುವುದು ಮತ್ತು ಆಚಾರ್ಯರು ಸೂಕ್ಷ್ಮವಾಗಿ ಸೂಚಿಸಿರುವುದನ್ನು ಸ್ಪಷ್ಟಪಡಿಸುವುದು. ಇದರಿಂದ ನನ್ನ ಈ ಗ್ರಂಥನಿರ್ಮಾಣ ಶ್ರಮ ಸಫಲ."

**ತಾತ್ಪರ್ಯ ಚಂದ್ರಿಕಾ**— ಜಯತೀರ್ಥರ ಸ ತ್ರಭಾಷ್ಯ ವ್ಯಾಖ್ಯಾನವಾದ 'ತತ್ವಪ್ರಕಾಶಿಕಾ' ಗ್ರಂಥದ ಟಿಪ್ಪಣಿ ಗ್ರಂಥ ಇದು. ಆದರೂ ಒಂದು ಸ್ವತಂತ್ರ ಗ್ರಂಥವೇ ನಾಲ್ಕು ಅಧ್ಯಾಯದ ಬ್ರಹ್ಮಸೂತ್ರಕ್ಕೆ ಕೇವಲ ಎರಡು ಅಧ್ಯಾಯಗಳಿಗೆ ಮಾತ್ರ ಚಂದ್ರಿಕಾ ಗ್ರಂಥವಿದೆ.

ಚಂದ್ರಿಕಾದಲ್ಲಿ ಹೇಳಿರುವ ವಿಷಯವನ್ನು ವ್ಯಾಸತೀರ್ಥರು ಹೀಗೆ ಸಂಗ್ರಹಿಸಿದ್ದಾರೆ. ಸೂತ್ರೇ ಭಾಷ್ಯೇನುಭಾಷ್ಯೇಚ ಸನ್ಯಾಯ ವಿವೃತೌ ತಥಾ ಟೀಕಾಸುಚ ಯದಸ್ಪಷ್ಟಂ ತಚ್ಚ ಸ್ಪಷ್ಟೀಕರಿಷ್ಯತೇ ॥ ಪ್ರತಿಸೂತ್ರಂ ಪ್ರಕಾಶ್ಯೇತೇ ಘಟನಾಘಟನೇ ಮಯಾ ಸ್ವೀಯಾನ್ಯ ಪಕ್ಷಯೋಃ ಸಮ್ಯಕ್ ವಿದಾಂಕುರ್ವಂತು ಸೂರಯಃ ॥

'ಸೂತ್ರದಲ್ಲಿ ಮತ್ತು ಸೂತ್ರಕ್ಕೆ ಸಂಬಂಧಿಸಿದ ಪ್ರಾಚೀನರ ಗ್ರಂಥಗಳಲ್ಲಿ ಅಸ್ಪಷ್ಟ ವಿಚಾರವನ್ನು ಸ್ಪಷ್ಟ ಪಡಿಸುವುದು. ಪ್ರತಿ ಸೂತ್ರಕ್ಕೂ ಮಾಧ್ವ ಭಾಷ್ಯದ ಅರ್ಥಗಳು ಹೇಗೆ ಅನುಗುಣವಾಗಿವೆ, ಉಳಿದ ಮತಾಚಾರ್ಯರ ಅರ್ಥ ಹೇಗೆ ಅನುಗುಣವಾಗಿಲ್ಲ ಎಂಬುದನ್ನು ವಿಮರ್ಶಿಸುವುದು ಈ ಗ್ರಂಥದ ಪ್ರೌಢಿಮೆಯಿಂದ ವ್ಯಾಸತೀರ್ಥರು ಚಂದ್ರಿಕಾಚಾರ್ಯರೆಂದೇ ಪ್ರಸಿದ್ಧಿ ಪಡೆದರು

**ತರ್ಕತಾಂಡವ**— ಇದು ವಾದ ಗ್ರಂಥಗಳಲ್ಲಿ 'ಗ್ರಂಥರಾಜ' ಎಂಬ ಖ್ಯಾತಿ ಪಡೆದಿದೆ. ಮುಖ್ಯವಾಗಿ ತಾರ್ಕಿಕ ದರ್ಶನವನ್ನು ವಿಮರ್ಶಿಸುವ ಈ ಗ್ರಂಥ ಕೆಲವೆಡ ಮೀಮಾಂಸಾ ದರ್ಶನದ ತತ್ವಗಳನ್ನು ವಿಮರ್ಶಿಸುತ್ತದೆ.ಡಾ. ಎಸ್. ಎನ್. ಗುಪ್ತಾರವರ ಮಾತಿನಲ್ಲಿ "The Logical skill and depth of acute dialectical thinking shown by Vyasathirta stands almost unrivalled in the whole field of Indian thought." ಇದರಲ್ಲಿ ಪ್ರತ್ಯಕ್ಷ. ಶಬ್ದ ಮತ್ತು ಆಗಮವೆಂದು ಮೂರು ಪರಿಚ್ಛೇದಗಳಿವೆ. 'ನ್ಯಾಯಾಮೃತಾಧಿಗತಾ ಕೀರ್ತಿಃ ತಾಂಡವೇನ ವಿನಾಶಿತಾ' ವ್ಯಾಸತೀರ್ಥರ ನ್ಯಾಯಾಮೃತ ಗ್ರಂಥದ ಸಹಾಯ ಪಡೆದು ತಾರ್ಕಿಕರು ಅದ್ವೈತವಾದಿಗಳಿಂದ ಜಯ ಸಾಧಿಸಿ ಕೀರ್ತಿ ಪಡೆದರು. ತರ್ಕತಾಂಡವ ಗ್ರಂಥದ ದೋಷಗಳಿಗೆ ಪ್ರತ್ಯುತ್ತರ ಹೇಳಲಾರದೆ ಆ ಕೀರ್ತಿಯನ್ನೆಲ್ಲಾ ಕಳೆದುಕೊಂಡರು ಎಂದು ಒಂದು ಅಭಿಯುಕ್ತೋಕ್ತಿ. ಇದುವರೆಗೆ ಈ ಗ್ರಂಥಕ್ಕೆ ಯಾರೂ ಖಂಡನೆಯನ್ನು ಬರೆದಂತಿಲ್ಲ.

# ಶ್ರೀಮತ್ತಾತ್ಪರ್ಯ ಚಂದ್ರಿಕಾ

ದಿ. ರಾವ್‌ಬಹದ್ದೂರ್ ವೆಂಕಟೇಶಾಚಾರ್ಯ

ಅಸ್ಪೃಷ್ಟದೋಷಗಂಧಾಯ ಕಲ್ಯಾಣಗುಣಸಿಂಧವೇ ।
ನಮೋ ನಮೋ ಭಕ್ತ ಮುಕ್ತಿದಾಯಿನೇ ಶೇಷಶಾಯಿನೇ ॥

ಶ್ರೀವ್ಯಾಸರಾಯರು ನ್ಯಾಯಾಮೃತಾದಿ ಅನೇಕ ವಿದ್ವನ್ಮಾನ್ಯ ಗ್ರಂಥಗಳನ್ನು ರಚಿಸಿರುವರು. ಆದರೂ ಚಂದ್ರಿಕಾಚಾರ್ಯರೆಂದು ಲೋಕದಲ್ಲಿ ಇವರು ಪ್ರಸಿದ್ಧಿ ಗೊಂಡಿರುವರು. ಈ ಗ್ರಂಥ ರಚನೆಯಿಂದ ವ್ಯಾಸರಾಯರು ಶ್ರೀಮದಾಚಾರ್ಯರಿಗೆ ಮಾಡಿರುವ ಸೇವೆಯು ಬಹುದೊಡ್ಡದು. ಆದುದರಿಂದ ಇಂತಹ ಪ್ರಸಿದ್ಧಿಯು ಇವರಿಗೆ ಯೋಗ್ಯವೇ ಸರಿ.

ಶ್ರೀಬಾದರಾಯಣರು ಸರ್ವವೇದಾರ್ಥವನ್ನು ನಿರ್ಣಯಮಾಡುವುದಕ್ಕಾಗಿ ಬ್ರಹ್ಮಸೂತ್ರಗಳನ್ನು ರಚಿಸಿದರು. ಈ ಸೂತ್ರಗಳ ಅರ್ಥವು ಬಾದರಾಯಣರ ಅಭಿಪ್ರಾಯವನ್ನು ತಿಳಿಯದವರಿಂದ ರಚಿಸಲ್ಪಟ್ಟ ಭಾಷ್ಯಾದಿಗಳಿಂದ ಮುಚ್ಚಿಹೋಯಿತು. ಆಗ ಶ್ರೀಮನ್ನಾರಯಣನ ಆಜ್ಞೆಯಿಂದ ವಾಯುದೇವರು ಆನಂದತೀರ್ಥರಾಗಿ ಅವತರಿಸಿ. ತಮ್ಮ ಸಾಕ್ಷಾದ್ಗುರುಗಳಾದ ಬಾದರಾಯಣರಿಗೆ ಸಮ್ಮತವಾದ ಸೂತ್ರಾರ್ಥವನ್ನು ವಿವರಿಸುವ ಬ್ರಹ್ಮಸೂತ್ರಭಾಷ್ಯ. ಅನುವ್ಯಾಖ್ಯಾನ, ನ್ಯಾಯ ವಿವರಣ, ಅಣುಭಾಷ್ಯ ಈ ನಾಲ್ಕು ಗ್ರಂಥಗಳನ್ನು ರಚಿಸಿದರು. ಭಾಷ್ಯದ ಮೇಲೆ ತ್ರಿವಿಕ್ರಮ ಪಂಡಿತಾಚಾರ್ಯರು 'ತತ್ವಪ್ರದೀಪ' ವೆಂಬ ಕೃತಿಯನ್ನೂ, ಪದ್ಮನಾಭತೀರ್ಥರು 'ಸತ್ತರ್ಕದೀಪಾವಳಿ' ಎಂಬ ಟೀಕೆಯನ್ನೂ ಬರೆದಿರುವರು. ಅನುವ್ಯಾಖ್ಯಾನದ ಮೇಲೆ ಪದ್ಮನಾಭತೀರ್ಥರು ರಚಿಸಿದ 'ಸನ್ನ್ಯಾಯರತ್ನಾವಳಿ' ಎಂಬ ಗ್ರಂಥವೂ ಮತ್ತು ನಾರಾಯಣ ಪಂಡಿತಾಚಾರ್ಯರ 'ನಯ ಚಂದ್ರಿಕೆ'ಯೂ ಉಂಟು. ಜಯತೀರ್ಥರು ಭಾಷ್ಯದ ವಿವರಣ ರೂಪವಾದ 'ತತ್ವ ಪ್ರಕಾಶಿಕಾ' ಎಂಬ ಗಂಭೀರವಾಧ ಟೀಕೆಯನ್ನೂ ಅನುವ್ಯಾಖ್ಯಾನದ ಮೇಲೆ ಅಮೃತಪ್ರಾಯವಾದ ಶ್ರೀಮನ್ನ್ಯಾಯಸುಧಾ ಗ್ರಂಥವನ್ನೂ ನ್ಯಾಯ ವಿವರಣದ ಸ್ವಲ್ಪ ಭಾಗಕ್ಕೆ ಟೀಕೆಯನ್ನೂ ರಚಿಸಿರುವರು.

ಸಿದ್ಧಾಂತವು ದ್ವಿದಳಾತ್ಮಕವಾದದ್ದು. ಪರಮತ ಖಂಡನ ಸ್ವಮತಸ್ಥಾಪನ. ಮೇಲೆ ಉಕ್ತವಾದ ಗ್ರಂಥಗಳಲ್ಲಿ ಪರಮತ ಖಂಡನವೂ ಸ್ವಮತಸ್ಥಾಪನೆಯೂ ಸಿದ್ಧವಾಗಿವೆ. ಅಲ್ಲಲ್ಲಿ ಹೇಳಿರುವ ಯುಕ್ತಿಗಳನ್ನು ಒಟ್ಟುಗೂಡಿಸುವುದಲ್ಲದೆ ತಮ್ಮದೇ ಆದ ಅಪೂರ್ವ ಯುಕ್ತಿಗಳನ್ನು ಚಾಲನ ಮಾಡುವುದರ ಮೂಲಕ ಅನ್ಯ ಮತೀಯರು ಅವರ ಸಿದ್ಧಾಂತ ಸ್ಥಾಪನೆಗಾಗಿ ತಮ್ಮ ಭಾಷ್ಯಾದಿಗಳಲ್ಲಿ ಉತ್ಪ್ರೇಕ್ಷಿಸಿರುವ ಸರ್ವ ಆಕ್ಷೇಪ ಸಮಾಧಾನಗಳೂ ಯುಕ್ತಿ ಯುಕ್ತವಲ್ಲವೆಂದು ತೋರಿಸಿ, ಶ್ರೀಮದಾಚಾರ್ಯರು ತಮ್ಮ ಗ್ರಂಥಗಳಲ್ಲಿ ನಿರೂಪಿಸಿರುವುದೇ ಸೂತ್ರಕಾರರ ಅಭಿಪ್ರಾಯವು ಎಂದು ನಿಪುಣತರವಾಗಿ ಪ್ರತಿಪಾದಿಸುವುದೇ ತಾತ್ಪರ್ಯ ಚಂದ್ರಿಕೆಯನ್ನು ರಚಿಸುವುದರಲ್ಲಿ ಶ್ರೀವ್ಯಾಸರಾಯರ ಗುರಿ.

ಈ ತಾತ್ಪರ್ಯ ಚಂದ್ರಿಕೆಯ ಮೇಲೆ ಶ್ರೀರಾಘವೇಂದ್ರಸ್ವಾಮಿಗಳವರು 'ತಾತ್ಪರ್ಯ ಚಂದ್ರಿಕಾಪ್ರಕಾಶ' ಎಂಬ ವಿಸ್ತಾರವಾದ ಗ್ರಂಥವನ್ನು ರಚಿಸಿರುತ್ತಾರೆ. ಇದರಲ್ಲಿ ಚಂದ್ರಿಕೆಯಲ್ಲಿ ಪ್ರಸಕ್ತವಾದ ಪೂರ್ವಮೀಮಾಂಸಾ, ವ್ಯಾಕರಣ ಇವೇ ಮೊದಲಾದ ಶಾಸ್ತ್ರಪ್ರಕ್ರಿಯೆಗಳನ್ನು ವಿಷದಪಡಿಸುವುದಲ್ಲದೇ ಚಂದ್ರಿಕಾಚಾರ್ಯರ ಅನಂತರದಲ್ಲಿ ಇತರ ಮತೀಯರು ಆಚಾರ್ಯರ ಸೂತ್ರಭಾಷ್ಯದ ಮೇಲೆ ಮಾಡಿರುವ ಆಕ್ಷೇಪಗಳನ್ನೂ ನಿರಾಕರಿಸಿರುತ್ತಾರೆ. ರಾಘವೇಂದ್ರಸ್ವಾಮಿಗಳವರು ಈ ಗ್ರಂಥದಲ್ಲಿ ವ್ಯಾಸರಾಯರನ್ನು ಈ ರೀತಿ ವಂದಿಸಿದರು.

ಪದವಾಕ್ಯ ಪ್ರಮಾಣಜ್ಞಾನ್ ಸಂಪ್ರದಾಯಾರ್ಥ ಕೋವಿದಾನ್ ।<br>
ವ್ಯಾಸತೀರ್ಥ ಮುನೀನ್ಸೇವೇ ದುರ್ವಾದಿ ಫಣಿಪಕ್ಷಿಪಾನ್ ॥

ಇದರ ಅರ್ಥ— ವ್ಯಾಕರಣ, ಮೀಮಾಂಸ, ನ್ಯಾಯ ಈ ಶಾಸ್ತ್ರಗಳನ್ನು ಬಲ್ಲ ತತ್ವವಾದ ಗ್ರಂಥಗಳ ಸಂಪ್ರದಾಯಾರ್ಥವನ್ನೂ ಚೆನ್ನಾಗಿ ತಿಳಿದ ಮತ್ತು ದುರ್ವಾದಿಗಳೆಂಬ ಸರ್ಪಗಳಿಗೆ ಪಕ್ಷಿರಾಜನಂತಿರುವ ವ್ಯಾಸತೀರ್ಥ ಮುನಿಗಳನ್ನು ಸೇವಿಸುತ್ತೇನೆ.

ಶ್ರೀ ರಾಘವೇಂದ್ರಸ್ವಾಮಿಗಳು ವ್ಯಾಸರಾಯರಿಗೆ ಕೊಟ್ಟಿರುವ ವಿಶೇಷಣಗಳಲ್ಲಿ ನಾವು ಚೆನ್ನಾಗಿ ಗಮನಿಸಬೇಕಾದದ್ದು 'ಸಂಪ್ರದಾಯಾರ್ಥ ಕೋವಿದಾನ್' ಎಂಬ ವಿಶೇಷಣ. ಚಂದ್ರಿಕಾಚಾರ್ಯರು ಚಂದ್ರಿಕೆಯಲ್ಲಿ ನಿರೂಪಿಸಿರುವುದೆಲ್ಲವೂ ಪೂರ್ವಾಚಾರ್ಯರುಗಳಿಗೆ ಸಮ್ಮತವಾದದ್ದು; ಆದ್ದರಿಂದ ಈ ಗ್ರಂಥದಲ್ಲಿ ಪ್ರತಿಪಾದಿಸಿರುವುದು ಯಾವುದೇ ಆಗಲೀ ಶ್ರೀಮದಾಚಾರ್ಯರಿಗೆ ಸಮ್ಮತವಾದದ್ದು ಹೌದೋ ಅಲ್ಲವೋ ಎಂಬುದಾಗಿ ಯಾರೂ ಸಂಶಯ ಪಡಬಾರದು, ಎಂದು ಚಂದ್ರಿಕಾಚಾರ್ಯರಿಗೆ 'ಸಂಪ್ರದಾಯಾರ್ಥ ಕೋವಿದಾನ್' ಎಂಬ ವಿಶೇಷಣವನ್ನು ಕೊಡುವುದರಲ್ಲಿ ಶ್ರೀ ರಾಘವೇಂದ್ರಸ್ವಾಮಿಗಳ ಅಭಿಪ್ರಾಯ.

ಈ ಗ್ರಂಥದ ಆದಿಯಲ್ಲಿ ವ್ಯಾಸರಾಯರು ಹೀಗೆ ಪ್ರತಿಜ್ಞೆ ಮಾಡಿರುವರು-

ಸೂತ್ರೇ ಭಾಷ್ಯೇನು ಭಾಷ್ಯೇಚ ಸನ್ನ್ಯಾಯ ವಿವೃತೌ ತಥಾ ।
ಟೀಕಾಸು ಚ ಯದಸ್ಪಷ್ಟಂ ತಚ್ಚ ಸ್ಪಷ್ಟೀಕರಿಷ್ಯತೇ ॥
ಪ್ರತಿಸೂತ್ರಂ ಪ್ರಕಾಶ್ಯೇತೇ ಘಟನಾಘಟನೇ ಮಯಾ ।
ಸ್ವೀಯಾನ್ಯಪಕ್ಷಯೋಃ ಸಮ್ಯಗ್ವಿದಾಂ ಕುರ್ವಂತು ಸೂರಯಃ ॥

ಅರ್ಥ– ಬ್ರಹ್ಮಸೂತ್ರಗಳು, ಅನುವ್ಯಾಖ್ಯಾನ ಮತ್ತು ಅನುಭಾಷ್ಯ ಇವುಗಳಲ್ಲಿಯೂ, ತ್ರಿವಿಕ್ರಮ ಪಂಡಿತಾಚಾರ್ಯರಿಂದ ರಚಿತವಾದ 'ತತ್ವಪ್ರದೀಪ' ಎಂಬ ಗ್ರಂಥ. ಅನುವ್ಯಾಖ್ಯಾನಕ್ಕೆ ಟೀಕೆಯಾದ 'ನ್ಯಾಯಸುಧಾ'. ಪದ್ಮನಾಭತೀರ್ಥರಿಂದ ರಚಿತವಾದ "ಸನ್ನ್ಯಾಯ ರತ್ನಾವಳಿ". ನ್ಯಾಯವಿವರಣ ಟೀಕಾ. ತತ್ವಪ್ರಕಾಶಿಕಾ ಈ ಗ್ರಂಥಗಳಲ್ಲಿ ಯಾವುದು ಅಸ್ಪಷ್ಟವೋ ಅದು (ಚಂದ್ರಿಕೆಯಲ್ಲಿ) ಸ್ಪಷ್ಟಮಾಡಲ್ಪಡುತ್ತೆ.

ಪ್ರತಿಯೊಂದು ಸೂತ್ರದ ರಚನೆಯೂ ನಮ್ಮ ಪಕ್ಷದಲ್ಲಿ ಸರಿ ಹೋಗುತ್ತದೆ. ಇತರರ ಪಕ್ಷದಲ್ಲಿ ಸರಿಹೋಗುವುದಿಲ್ಲ ಎಂಬುದು ಈ ಗ್ರಂಥದಲ್ಲಿ ಚೆನ್ನಾಗಿ ತೋರಿಸಲ್ಪಡುತ್ತೆ. ಜ್ಞಾನಿಗಳು ಇದನ್ನು ಗಮನಿಸುವರಾಗಲಿ (ಅಥವಾ ತಿಳಿಯುವರಾಗಲಿ) ಈ ಪ್ರತಿಜ್ಞೆಯನ್ನು ಶ್ರೀವ್ಯಾಸರಾಯರು ನಿಪುಣತರವಾಗಿ ಚಂದ್ರಿಕಾ ಗ್ರಂಥದಲ್ಲಿ ಸಾಧಿಸಿರುವರು.

ಇದಕ್ಕೆ ದೃಷ್ಟಾಂತವಾಗಿ "ಓಂ ಅಂತಸ್ತದ್ಧರ್ಮೋಪದೇಶಾತ್ ಓಂ" "ಓಂ ಭೇದ ವ್ಯಪದೇಶಾಚ್ಚಾನ್ಯಃ ಓಂ" ಈ ಎರಡು ಸೂತ್ರಗಳನ್ನೊಳಗೊಂಡ ಅಧಿಕರಣಕ್ಕೆ ಇತರರು ಮಾಡುವ ಅರ್ಥವು ಯೋಗ್ಯವಲ್ಲವೆಂದು ತೋರಿಸುವ ರೀತಿಯನ್ನೂ ಸ್ವಲ್ಪ ಮಟ್ಟಿಗೆ ವಿವರಿಸಲು ಯತ್ನಿಸುತ್ತೇನೆ. ಸಿದ್ಧಾಂತ ರೀತ್ಯಾ ಈ ಅಧಿಕರಣ ಸೂತ್ರಗಳಿಗೆ ಅರ್ಥ ಹೀಗೆ– "ಓಂ ಅಂತಸ್ತದ್ಧರ್ಮೋಪದೇಶಾತ್ ಓಂ" 'ಅಂತಃ ಪ್ರವಿಷ್ಟಂ ಕರ್ತಾರಂ' 'ಅಂತಶ್ಚಂದ್ರಮಸಿ ಮನಸಾ ಚರಂತಂ' ಹೀಗೆ ತೈತರೀಯಾರಣ್ಯಕದಲ್ಲಿ ಶ್ರುತವಾದದ್ದು ಬ್ರಹ್ಮನೇವೆ (ವಿಷ್ಣುವೇನೇ) ಇಂದ್ರಾದಿಗಳು ಅಲ್ಲ. ಏಕೆಂದರೆ 'ತದ್ಧರ್ಮೋಪದೇಶಾತ್' ಸಮುದ್ರಸ್ಥತ್ವ, ಬ್ರಹ್ಮಾಂಡವೀರ್ಯತ್ವ' ಇವೇ ಮೊದಲಾದ ವಿಷ್ಣು ಧರ್ಮಗಳು ಇಲ್ಲಿ ಶ್ರುತವಾಗಿರುವುದರಿಂದ, "ಓಂ ಭೇದವ್ಯಪದೇಶಾಚ್ಚಾನ್ಯಃ ಓಂ" ಕೇವಲ ಅಂತಸ್ಥಿತನು ವಿಷ್ಣುವು ಎಂದು ಇಷ್ಟೇ ಅಲ್ಲ; ಅವನು ಇಂದ್ರಾದಿಗಳಿಂದ ಅನ್ಯನೂ ಆಗಿರುವನು. ಏಕೆಂದರೆ, "ಭೇದವ್ಯಪದೇಶಾತ್" 'ಇಂದ್ರಸ್ಯ ಆತ್ಮಾ' ಇತ್ಯಾದಿ ಸನ್ನಿಹಿತ ವಾಕ್ಯಗಳಲ್ಲಿ ಇಂದ್ರಾದಿಗಳಿಗೆ ಅಂತರ್ಯಾಮಿಯೂ ಅವರನ್ನು ಶಾಸನ ಮಾಡತಕ್ಕವನೂ ಎಂದೀ ರೀತಿಯಲ್ಲಿ ಅವನಿಗೆ ಇಂದ್ರಾದಿಗಳಿಂದ ಭೇದವನ್ನು ಹೇಳಿರುವುದರಿಂದ. ಇಲ್ಲಿ ಗಮನಿಸಬೇಕಾದ ವಿಷಯಗಳು ಇವು.

೧. ಆನಂದಮಯಾಧಿಕರಣ ಆದಮೇಲೆ ಈ ಅಧಿಕರಣ ಹೊರಡಲು ಏನು ಸಂಗತಿ ? ಇದಕ್ಕೆ ಉತ್ತರ– ಆನಂದಮಯಾಧಿಕರಣದ ವಿಷಯ ವಾಕ್ಯದಲ್ಲಿ 'ಅದೃಶ್ಯೇ ಅನಾತ್ಮ್ಯೇ' ಎಂದು ಆನಂದಮಯನಿಗೆ ಅದೃಶ್ಯತ್ವವು ಹೇಳಿದೆ. ಅದೃಶ್ಯತ್ವವೆಂದರೆ, ಪೂರ್ಣವಾಗಿ ತಿಳಿಯುವುದಕ್ಕೆ ಆಗದೇ ಇರುವುದು. 'ಅಂತಶ್ಚಂದ್ರಮಸಿ ಮನಸಾ ಚರಂತಂ ಸಹೈವ ಸಂತಂ ನವಿಜಾನಂತಿ ದೇವಾಃ' ಎಂದು ಅಂತಃ ಪ್ರವಿಷ್ಟನನ್ನು ದೇವತೆಗಳು ತಿಳಿಯರು ಎಂಬುದಾಗಿ ಹೇಳಿರುವುದರಿಂದ ಇಲ್ಲಿಯೂ ಅದೃಶ್ಯತ್ವವು ಅಂತಃ ಪ್ರವಿಷ್ಟನಿಗಾಗಿ ಹೇಳಿದಂತಾಯಿತು. ಶ್ರುತಿಯ ಅರ್ಥ– ಚಂದ್ರನ ಒಳಗೆ ಯಥೇಷ್ಟವಾಗಿ ಸಂಚರಿಸುವ, ಸರ್ವಕರ್ತನಾದ, ತಮ್ಮೊಳಗೆ ಪ್ರವಿಷ್ಟನಾಗಿ ತಮ್ಮ ಜೊತೆಯಲ್ಲಿಯೇ ಇರುವವನನ್ನು ದೇವತೆಗಳು ತಿಳಿಯರು.

ಈಗ, ಅಂತಃ ಪ್ರವಿಷ್ಟನು "ಇಂದ್ರೋ ರಾಜಾ ಜಗತೋ ಯ ಈಶೇ'' ಇವೇ ಮೊದಲಾದ ಈ ಪ್ರಕರಣದಲ್ಲಿನ ಸನ್ನಿಹಿತ ವಾಕ್ಯಗಳ ಬಲದಿಂದ ಅಂತಃ ಪ್ರವಿಷ್ಟನು ಇಂದ್ರಾದಿ ದೇವತೆಗಳಲ್ಲಿ ಯಾರಾದರೂ ಒಬ್ಬನಾದಲ್ಲಿ ಆನಂದಮಯನೂ ಕೂಡ ವಿಷ್ಣುವಲ್ಲದೆ ಇಂದ್ರಾದಿಗಳಲ್ಲಿ ಯಾರಾದರೂ ಒಬ್ಬನಾದರು. ಹೀಗೆ ಆನಂದ ಮಯಾಧಿಕರಣದ ಮೇಲೆ ಅಕ್ಷೇಪ ಬಂದರೆ, ಅದಕ್ಕೆ ಸಮಾಧಾನ ರೂಪವಾದದ್ದು ಈ ಅಧಿಕರಣ.

೨. ಇಲ್ಲಿ ಅಂತಸ್ಥತ್ವ ಲಿಂಗವನ್ನು ವಿಷ್ಣುವಿನಲ್ಲಿ ಸಮನ್ವಯ ಮಾಡುವುದರಿಂದ ಇಂದ್ರ, ಸೂರ್ಯ, ಚಂದ್ರ ಮೊದಲಾದ ಸರ್ವದೇವತಾ ನಾಮಗಳನ್ನೂ ವಿಷ್ಣುವಿನಲ್ಲಿ ಸಮನ್ವಯ ಮಾಡಿದಂತಾಗುವುದು. ಇದು ನಮ್ಮ ಪಕ್ಷ ಅಂತಸ್ಥತ್ವವೆಂದರೆ ಅಂತರ್ಯಾಮಿತ್ವವೆಂದರ್ಥ.

ಶಂಕರಾಚಾರ್ಯರ ಭಾಷ್ಯರೀತ್ಯಾ ಈ ಅಧಿಕರಣದಲ್ಲಿ ವಿಚಾರ್ಯವಾದದ್ದು ಛಾಂದೋಗ್ಯೋಪನಿಷತ್ತಿನ ಮೊದಲನೇ "ಯ ಏಷೋಽನ್ತರಾದಿತ್ಯೇ ಹಿರಣ್ಮಯಃ ಪುರುಷೋ ದೃಶ್ಯತೇ" "ಯ ಏಷೋಽನ್ತರಕ್ಷಿಣೇ ಪುರುಷೋ ದೃಶ್ಯತೇ" ಎಂದು ಹೊರಟಿರುವ ಎರಡು ವಾಕ್ಯಗಳು. ಈ ವಾಕ್ಯಗಳ ಅರ್ಥ ಹೀಗೆ– ಸೂರ್ಯನ ಒಳಗೆ ಸುವರ್ಣವರ್ಣನಾದ ಯಾವ ಪುರುಷನು ಕಾಣುತ್ತಾನೆಯೋ ಅವನು ಸುವರ್ಣವರ್ಣವಾದ ಶ್ಮಶ್ರುವುಳ್ಳವನು ಮತ್ತು ಉಗುರು ಕೊನೆಯವರೆಗೂ ಅವನ ದೇಹ ಬಂಗಾರವರ್ಣವುಳ್ಳದ್ದು, ಅವನ ಎರಡು ಕಣ್ಣುಗಳು ನಾಳದ ಮೇಲಿರುವ ಕಮಲದಂತೆ ಕೆಂಪಾಗಿವೆ. ಇವನಿಗೆ 'ಉತ್' ಎಂಬ ನಾಮ. ಏಕೆಂದರೆ, ಇವನು ಸರ್ವ ಪಾಪಗಳನ್ನೂ ಮೀರಿದವನು. ಯಾವನಾದರೂ ಇವನನ್ನು ಹೀಗೆ ತಿಳಿಯುವನೋ ಅವನು ಸರ್ವಪಾಪಗಳನ್ನೂ ಮೀರುವವನಾಗುತ್ತಾನೆ. ಪುರುಷನು ಕಣ್ಣಿನೊಳಗೆ ಕಾಣುತ್ತಾನೆಯೋ ಅವನಿಗೆ ಆದಿತ್ಯನಲ್ಲಿ ಕಾಣುವ ಪುರುಷನ ರೂಪವೇ ರೂಪ, ಇತ್ಯಾದಿ.

ಈಗ, ಆದಿತ್ಯ ಮಂಡಲದಲ್ಲಿ ಉಪಾಸ್ಯತ್ವೇನ ಶ್ರುತನಾದ ಹಿರಣ್ಮಯ ಪುರುಷನು ಯಾರು ? ವಿದ್ಯಾಕರ್ಮಗಳಿಂದ ಬಂದ ಐಶ್ವರ್ಯವುಳ್ಳ ಯಾವನೋ ಒಬ್ಬ ಸಂಸಾರಿಯೋ ಅಥವ ಪರಮಾತ್ಮನೇ ಇದು ಸಂಶಯ.

ಪೂರ್ವಪಕ್ಷ ಹೀಗೆ– ಸೂರ್ಯನಲ್ಲಿರುವ ಪುರುಷನಿಗೆ ಸುವರ್ಣರೂಪವನ್ನು ಹೇಳಿದೆ. ಆದಿತ್ಯನಲ್ಲಿರುವನೆಂದು ಹೇಳಿರುವುದರಿಂದ ಈ ಪುರುಷನಿಗೆ ಆದಿತ್ಯನು ಆಧಾರನೆಂದು ಹೇಳಿದಂತಾಯಿತು ಮತ್ತು ಇವನು ಮೇಲಿನ ಲೋಕಗಳಿಗೆ ಸ್ವಾಮಿಯೆಂದು ಹೇಳಿರುವುದರಿಂದ ಇವನ ಐಶ್ವರ್ಯವು ಅವಧಿವುಳ್ಳದ್ದಾಯಿತು. ಪರಮಾತ್ಮನಾದರೋ ಅರೂಪನು. ಅನಾಶ್ರಯನು. ಇವನ ಐಶ್ವರ್ಯಕ್ಕೆ ಅವಧಿಯಿಲ್ಲ. ಆದ್ದರಿಂದ ಆದಿತ್ಯನಲ್ಲಿ ಉಪಾಸ್ಯತ್ವೇನ ಶ್ರುತನಾದ ಪುರುಷನು ಸಂಸಾರಿಯೇ ಆಗಿರಬೇಕು

ಸಿದ್ಧಾಂತ— ಆದಿತ್ಯನಲ್ಲಿಯೂ ಅಕ್ಷಿಯಲ್ಲಿಯೂ ಇರುವ ಪುರುಷನು ಜೀವನಲ್ಲ, ಪರಮಾತ್ಮನೇ. ಏಕೆಂದರೆ, 'ಸ ಏಷ ಸರ್ವೇಭ್ಯಃ ಪಾಪ್ಮಭ್ಯಃ ಉದಿತಃ' ಎಂದು ಅವನಿಗೆ ಯಾವ ಪಾಪವೂ ಇಲ್ಲವೆಂದು ಪರಮಾತ್ಮನ ಧರ್ಮವು ಆದಿತ್ಯವಾಕ್ಯದಲ್ಲಿಯೂ 'ಸೈವರ್ಕ್‌ತ್ಸಾಮ' ಸರ್ವಾತ್ಮಕತ್ವರೂಪ ಪರಮಾತ್ಮ ಧರ್ಮವು, ಅಕ್ಷಿವಾಕ್ಯದಲ್ಲಿಯೂ ಕಂಡುಬರುತ್ತೆ. ಈ ಧರ್ಮಗಳು, ಅಪಹತ ಪಾಪ್ಮತ್ವಾದಿಗಳಿಂದ ಶ್ರುತಿಗಳಲ್ಲಿ ಪ್ರಸಿದ್ಧನಾದ ಪರಮಾತ್ಮನಿಗೆ ಹೊಂದುತ್ತವೆಯೇ ಹೊರತು ಸಂಸಾರಿ ಜೀವನಿಗೆ ಕೂಡುವುದಿಲ್ಲ.

ರೂಪವು ಪರಮಾತ್ಮನಿಗೆ ಹೇಗೆ ಆದೀತು ಎಂದಲ್ಲಿ, ಅವನು ರೂಪವಿಲ್ಲದವನು ಆದರೂ ಸಾಧನಾನುಷ್ಠಾನ ಮಾಡುವವನಿಗೆ, ಅನುಗ್ರಹ ಮಾಡುವುದಕ್ಕಾಗಿ ತನ್ನ ಇಚ್ಛೆಯಿಂದ ಉಪಾಸನಾಕ್ಕೆ ಯೋಗ್ಯವಾದ ಮಾಯಾಮಯವಾದ ರೂಪವನ್ನೂ ತೋರಿಸುತ್ತಾನೆಂದು ಹೇಳಬಹುದು. ಆದ್ದರಿಂದ ಇಲ್ಲಿ ಪ್ರಸಕ್ತನಾದ ಪುರುಷನು ಪರಮಾತ್ಮನು ಎಂಬುದಕ್ಕೆ ಇದು ಬಾಧಕವಲ್ಲ ಅಥವ ಸರ್ವವೂ ಬ್ರಹ್ಮ ಕಾರ್ಯವಾದ್ದರಿಂದ ಕಾರ್ಯದಲ್ಲಿನ ರೂಪಾದಿಗಳನ್ನೂ ಕಾರಣವಾದ ಬ್ರಹ್ಮನಲ್ಲಿ ಹೇಳಬಹುದು. ನಿರ್ವಿಶೇಷ ಬ್ರಹ್ಮಜ್ಞಾನವು ಮೋಕ್ಷಕ್ಕೆ ಸಾಧನವಾಗಿರುವಾಗ, ರೂಪಾದಿಗಳಿಂದ ವಿಶಿಷ್ಟನಾದ ಬ್ರಹ್ಮನ ನಿರೂಪಣವು ಮುಮುಕ್ಷುವಿಗೆ ಏಕೆ ಮಾಡಬೇಕೆಂದಲ್ಲಿ ಮೋಕ್ಷಕ್ಕೆ ಸಾಧನವಾದ ನಿರ್ವಿಶೇಷ ಬ್ರಹ್ಮಜ್ಞಾನಾರ್ಥವಾಗಿ ಎಂದು ಹೇಳುತ್ತೇವೆ. ಅಂದರೆ ಸವಿಶೇಷ ಬ್ರಹ್ಮನನ್ನು ಉಪಾಸನಾ ಮಾಡಿ ಮನಸ್ಸನ್ನು ವಶೀಕರಿಸಿಕೊಂಡವನಿಗೆ ನಿರ್ವಿಶೇಷ ಬ್ರಹ್ಮನ ಜ್ಞಾನವನ್ನು ಪಡೆಯುವುದು ಸುಲಭ.

ನಿರ್ವಿಶೇಷಂ ಪರಂಬ್ರಹ್ಮ ಸಾಕ್ಷಾತ್ಕರ್ತುಮನೀಶ್ವರಃ ।
ಯೇ ಮಂದಾಸ್ತೇನು ಕಂಪ್ಯಂತೇ ಸವಿಶೇಷ ನಿರೂಪಣೈಃ ॥

ಈ ಶ್ಲೋಕದ ಅಭಿಪ್ರಾಯ— ನಿರ್ಗುಣನಾದ ಪರಬ್ರಹ್ಮನನ್ನು ಸಾಕ್ಷಾತ್ಕರಿಸಲು

ಸಮರ್ಥರಲ್ಲದ ಯಾವ ಮಂದರಿರುವರೋ ಅವರಿಗಾಗಿ ದಯೆಯಿಂದ ಸಗುಣ ಬ್ರಹ್ಮನು ನಿರೂಪಿಸಲ್ಪಟ್ಟಿರುವನು,

ಕೆಲವರು ( ವಿಶಿಷ್ಟಾದ್ವೈತಿಗಳು ) ಇದೇ ವಾಕ್ಯವನ್ನುದಾಹರಿಸಿ ಹೀಗೆಯೇ ಪೂರ್ವ ಪಕ್ಷಮಾಡಿ 'ತಸ್ಯಯಥಾ ಕಪ್ಯಾಸಂ ಪುಂಡರೀಕ ಮೇವ ಮಕ್ಷಿಣೀ' ಎಂದು ಈ ಶ್ರುತಿಯಲ್ಲಿ ಪುಂಡರೀಕಾಕ್ಷತ್ವ ಲಿಂಗವಿರುವುದರಿಂದ ಆದಿತ್ಯಾಂತಸ್ಥನು ಪರಬ್ರಹ್ಮ ನೆಂದು ಸಿದ್ಧಾಂತಮಾಡಿರುವರು. ಇವೆರಡೂ ಸರಿಯಲ್ಲ. ನಾವು ಹೇಳುವ ರೀತಿ ಯಲ್ಲಿ ಆನಂದಮಯಾಧಿಕರಣದ ಮೇಲೆ ಆಕ್ಷೇಪಕ್ಕಾಗಿ ಬೇಕಾದ ಅದೃಶ್ಯತ್ವವೇ ಮೊದಲಾದ ಗುಣವಾಚಕ ಪದಗಳನ್ನೊಳಗೊಂಡಿರುವ ಮತ್ತು ಅದೇ ಪ್ರಕರಣದಲ್ಲಿ ಸಂಸಾರ ಚೇತನನಿಗೂ ಆದಿತ್ಯ ಪುರುಷನಿಗೂ ಭೇದ ಹೇಳುವ ವಾಕ್ಯಗಳುಳ್ಳ ಶ್ರುತಿ ಉದಾಹರಣೆಯು ಕೊಡುತ್ತಿರಲು ಅವೆರಡೂ ಇಲ್ಲದ ವಿಷಯ ವಾಕ್ಯೋದಾಹರಣೆ ಕೊಡುವು ದಿಲ್ಲವಾದ್ದರಿಂದ ಈ ಎರಡು ಮತವೂ ಸರಿಯಲ್ಲ. ಅಂದರೆ ನಾವು ಉದಾ ಹರಿಸಿರುವ 'ಅಂತಃ ಪ್ರವಿಷ್ಟಂ ಕರ್ತಾರಮೇಕಂ' ಇತ್ಯಾದಿ ವಾಕ್ಯಗಳನ್ನೊಳಗೊಂಡ ಪ್ರಕರಣದಲ್ಲಿ ಆನಂದಮಯಾಧಿಕರಣದ ಮೆ ಲೆ ಆಕ್ಷೇಪ ಮಾಡುವುದಕ್ಕೆ ಅವಕಾಶ ಕೊಡುವ ಅದೃಶ್ಯತ್ವ ಲಿಂಗವಿದೆ. ಮತ್ತು 'ಭೇದವ್ಯಪದೇಶಾಚ್ಚಾನ್ಯಃ' ಎಂಬೀ ಎರಡನೆಯಸೂತ್ರದಲ್ಲಿ ವಿವಕ್ಷಿತವಾದ ಭೇದವು ನಮ್ಮ ವಿಷಯವಾಕ್ಯದಲ್ಲಿದೆ. ಇವೆ ರಡೂ ಪರರಿಂದ ಉದಾಹೃತವಾದ ವಾಕ್ಯದಲ್ಲಿಲ್ಲ. ಪರರಿಂದ ಉದಾಹೃತವಾದ ವಾಕ್ಯವುಛಾಂದೋಗ್ಯ ಉಪನಿಷತ್ತಿನಲ್ಲಿದೆ. ಇಲ್ಲಿ ಭೇಧವ್ಯಪದೇಶವಿಲ್ಲ. ಭೇಧವ್ಯ ಪದೇಶ ವಿರುವುದು ಬೃಹದಾರಣ್ಯಕ ಉಪನಿಷತ್ತಿನ ಅಂತರ್ಯಾಮಿ ಬ್ರಾಹ್ಮಣ ದಲ್ಲಿ. ಈ ದೂಷಣವು ಇಬ್ಬರಿಗೂ ಕೂಡುತ್ತೆ.

ನೀರೂಪೇಶಿಚ ರೂಪಾದಿ ಯದ್ಯುಪಾಸ್ತ್ಯರ್ಥಮುಚ್ಯತೇ ।
ಜೀವೇಃಪಿ ಪಾಪ್ಮಾಭಾವಾದಿ ತದ್ವ್ಯುಪಾಸ್ತ್ಯರ್ಥ ಮುಚ್ಯತಾಂ ॥

ಬ್ರಹ್ಮ ರೂಪವಿಲ್ಲದವನಾದರೂ ಉಪಾಸನಾರ್ಥವಾಗಿ ರೂಪವು ಹೇಳಲ್ಪ ಡುತ್ತೆ ಎಂದು ಅಂದಲ್ಲಿ ಜೀವನಲ್ಲಿಯೂ ಪಾಪವಿಲ್ಲದಿರೋಣವು ಉಪಾಸನಾರ್ಥವಾಗಿ ಹೇಳಲ್ಪಡಬೇಕು.

ಇದರ ಅಭಿಪ್ರಾಯ— ನೀನು ಉದಾಹರಿಸಿರುವ ಪ್ರಕರಣದಲ್ಲಿ ಆದಿತ್ಯ ಪುರು ಷನಿಗೆ ರೂಪವು, ಪಾಪಾಭಾವವು ಹೇಳಿದೆ. ಪಾಪಾಭಾವ ಹೇಳಿರುವುದರಿಂದ ಜೀವ ನಲ್ಲ ಎಂದು ನೀನು ಹೇಳುವಿ. ರೂಪವಿಲ್ಲದ ಬ್ರಹ್ಮನಿಗೆ ರೂಪ ಹೇಳಿದೆಯಲ್ಲ ಎಂದು ನಾವು ಆಕ್ಷೇಪಿಸಿದರೆ, ಬ್ರಹ್ಮನಿಗೆ ರೂಪವಿಲ್ಲದಿದ್ದರೂ ಉಪಾಸನಾರ್ಥವಾಗಿ ಅದು ಹೇಳಿದೆ ಎಂದು ನೀನು ಸಮಾಧಾನ ಹೇಳಿದಲ್ಲಿ ಜೀವನಲ್ಲಿಯೂ ಕೂಡ ಪಾಪಾ ಭಾವವೂ ಇಲ್ಲವಾದರೂ ಉಪಾಸನಾರ್ಥವಾಗಿ ಪಾಪಾಭಾವವು ಹೇಳಿದೆಯೆಂದು

ಹೇಳಬಹುದಷ್ಟೇ. ನಿನ್ನ ಮತದಲ್ಲಿ ಉಪಾಸನಾ ವಾಕ್ಯಕ್ಕೆ ಹೀಗೆ ಉಪಾಸನಾ ಮಾಡಬೇಕೆಂಬುವುದರಲ್ಲಿ ತಾತ್ಪರ್ಯವೇ ಹೊರತು ಅರ್ಥದಲ್ಲಿ ತಾತ್ಪರ್ಯವಿಲ್ಲ. ಅಂದರೆ, ಉಪಾಸ್ಯವಸ್ತುವಿನಲ್ಲಿ ಆ ಧರ್ಮವಿರಬೇಕೆಂದಿಲ್ಲ. ಆದ್ದರಿಂದ ನಾವು ಮಾಡಿರುವ ಆಕ್ಷೇಪವನ್ನು ನಿನ್ನ ಮತರೀತ್ಯಾ ಪರಿಹಾರ ಮಾಡುವುದಕ್ಕಾಗುವುದಿಲ್ಲ.

ಸಗುಣ ಬ್ರಹ್ಮ ನಿರೂಪಣವು ನಿರ್ವಿಶೇಷ ಬ್ರಹ್ಮ ಜ್ಞಾನಕ್ಕಾಗಿ ಎಂದು ಹೇಳುವುದು ಕೂಡುವುದಿಲ್ಲ. ಏಕೆಂದರೆ 'ಉದೇತೀಹವೈ ಸರ್ವೇಭ್ಯಃ ಪಾಪ್ಮಭ್ಯೋಯ ಏವಂ ವೇದ' ಈ ಶ್ರುತಿಯಲ್ಲಿ ಆದಿತ್ಯ ಪುರುಷನ ಜ್ಞಾನದಿಂದ ಸರ್ವಪಾಪ ವಿಮುಕ್ತಿ ರೂಪ ಮುಕ್ತಿ ಫಲವು ಆಗುತ್ತದೆಂದು ಹೇಳಿರುವಾಗ, ಅದನ್ನು ಬಿಟ್ಟು ಸವಿಶೇಷ ಬ್ರಹ್ಮ ನಿರೂಪಣವು ಮೋಕ್ಷಕ್ಕೆ ಸಾಧನವಾದ ನಿರ್ಗುಣ ಬ್ರಹ್ಮ ಜ್ಞಾನಕ್ಕಾಗಿ ಎಂದು ಶ್ರುತಿಯಲ್ಲಿ ಹೇಳದ ಬೇರೇ ಫಲವನ್ನು ಕಲ್ಪಿಸುವುದು ಯೋಗ್ಯವಲ್ಲ.

ಕೊನೆಯದಾಗಿ,

ಆದ್ಯಸೂತ್ರೇ ಧರ್ಮಶಬ್ದಾದ್ದ್ವಿತೀಯೇ ಭೇದಶಬ್ದತಃ ।
ನಿರ್ಧರ್ಮಕತ್ವಮೈಕ್ಯಂ ಚ ನಿರಸ್ತಂ ಪರವಸ್ತುನಃ ।
ಧರ್ಮೋಭೇದಶ್ಚ ಮಿಥ್ಯಾಚೇತ್ ಶ್ರುತಿ ಸೂತ್ರಾ ಪ್ರಮಾಣತಾ ।
ವ್ಯಾಖ್ಯಾವ್ಯಾಜೇನ ಚೋಕ್ತಾ ಸ್ಯಾತ್ತ್ವಯಾ ಸೌಗತ ಸೌಹೃದಾತ್ ॥

ಮೊದಲನೇ ಸೂತ್ರದಲ್ಲಿ ಧರ್ಮಶಬ್ದವಿರುವುದರಿಂದಲೂ ಪರವಸ್ತುವು ನಿರ್ಧರ್ಮಕವೆಂಬುದೂ ಮತ್ತು ಜೀವನಿಂದ ಐಕ್ಯವುಳ್ಳದ್ದೂ ಎಂಬುದು ನಿರಾಕರಿಸಲ್ಪಟ್ಟಿತು. ಧರ್ಮವೂ, ಭೇದವೂ ಮಿಥ್ಯ ಎಂದಲ್ಲಿ ಸೂತ್ರವನ್ನು ವ್ಯಾಖ್ಯಾನ ಮಾಡುವೆನೆಂಬ ನೆಪದಿಂದ ಶ್ರುತಿಯೂ ಸೂತ್ರವೂ ಅಪ್ರಮಾಣವೆಂದು ಬೌದ್ಧನ ಸ್ನೇಹಿತನಾದ ನಿನ್ನಿಂದ ಹೇಳಲ್ಪಟ್ಟಂತಾಯಿತು.

ಇನ್ನೂ ಅನೇಕ ಅನುಪಪತ್ತಿಗಳನ್ನು ನಿರೂಪಿಸಿ ಈ ಅಧಿಕರಣಕ್ಕೆ ಪರರು ಮಾಡಿರುವ ವ್ಯಾಖ್ಯಾನವು ಸಮಂಜಸವಲ್ಲವೆಂದು ಶ್ರೀವ್ಯಾಸರಾಯರು ತಮ್ಮ ಚಂದ್ರಿಕಾ ಗ್ರಂಥದಲ್ಲಿ ತೋರಿಸಿರುತ್ತಾರೆ.

ನಾವು ನಿರೂಪಣದ ಏಕದೇಶವನ್ನು ಇಲ್ಲಿ ಸೂಚಿಸಿರುತ್ತೇವೆ.

ವ್ಯಾಸಾಯ ಭವನಾಶಾಯ ಶ್ರೀಶಾಯ ಗುಣರಾಶಯೇ ।
ಹೃದ್ಯಾಯ ಶುದ್ಧವಿದ್ಯಾಯ ಮಧ್ವಾಯ ಚ ನಮೋ ನಮಃ ॥

(Extract ವಿಶೇಷಾಂಕ ಪರಿಮಳ)

# ತಾತ್ಪರ್ಯ ಚಂದ್ರಿಕಾದಲ್ಲಿ

## ಪೂರ್ವಮೀಮಾಂಸಾನ್ಯಾಯಗಳ ಉಪಯೋಗ

---

ದರ್ಶನರತ್ನ ಪ್ರೊ. ಕೆ. ಟಿ. ಪಾಂಡುರಂಗಿ

ಪೂರ್ವಮೀಮಾಂಸಾಶಾಸ್ತ್ರವು ವೇದಗಳಲ್ಲಿಯ ಬ್ರಾಹ್ಮಣ ವಾಕ್ಯಗಳಿಗೆ ವ್ಯಾಖ್ಯಾನ ಮಾಡಲು ಸಹಾಯಕವಾದ ಅರ್ಥನಿರ್ಣಾಯಕ ತತ್ವಗಳನ್ನು ರೂಪಿಸಿ ಕರ್ಮಸ್ವರೂಪ, ಕರ್ಮಭೇದ, ಅಂಗಾಂಗಿಭಾವ, ಪ್ರಕೃತಿ–ವಿಕೃತಿಭಾವ ಇತ್ಯಾದಿ ಗಳನ್ನು ನಿರ್ಣಯಿಸಲು ಹೊರಟ ಶಾಸ್ತ್ರವು. ವೇದಾಂತವೂ ಕೂಡ ವೇದವಾಕ್ಯಗಳಿಗೆ ವ್ಯಾಖ್ಯಾನಮಾಡಿ ಪರಮಾತ್ಮನ ಸ್ವರೂಪ, ಜೀವ ಸ್ವರೂಪ, ಜೀವೇಶ್ವರ ಸಂಬಂಧ ಜಗತ್ಸ್ವರೂಪ, ಮೋಕ್ಷಸ್ವರೂಪ ಇತ್ಯಾದಿಗಳನ್ನು ತಿಳಿಸಲು ಹೊರಟ ಶಾಸ್ತ್ರವು. ಆದ್ದರಿಂದ ಪೂರ್ವಮೀಮಾಂಸಾಶಾಸ್ತ್ರವು ರೂಪಿಸಿದ ವೇದಗಳ ಅರ್ಥನಿರ್ಣಾಯಕ ತತ್ವಗಳನ್ನು ವೇದಾಂತವೂ ಉಪಯೋಗಿಸಿಕೊಳ್ಳುತ್ತದೆ. ದ್ವೈತ, ವಿಶಿಷ್ಟಾದ್ವೈತ, ಅದ್ವೈತ ಈ ಮೂರು ಮತದವರೂ ಈ ಪೂರ್ವಮೀಮಾಂಸಾ ನ್ಯಾಯಗಳನ್ನು ಉಪಯೋಗಿಸಿಕೊಳ್ಳುತ್ತಾರೆ. ಇದಲ್ಲದೆ ಧರ್ಮಶಾಸ್ತ್ರಕಾರರೂ ಪೂರ್ವಮೀಮಾಂಸಾ ನ್ಯಾಯಗಳನ್ನು ಉಪಯೋಗಿಸಿಕೊಳ್ಳುತ್ತಾರೆ. ವ್ಯಾಕರಣಶಾಸ್ತ್ರವು ಭಾಷೆಯ ಸ್ವರೂಪವನ್ನು ನಿರ್ಣಯಿಸುತ್ತದೆ. ಪೂರ್ವಮೀಮಾಂಸಾಶಾಸ್ತ್ರವು ಭಾಷೆಯ ಅರ್ಥವನ್ನು ನಿರ್ಣಯಿಸುವ ರೀತಿಯನ್ನು ಹೇಳಿಕೊಡುತ್ತದೆ. ಆದ್ದರಿಂದ ವೇದಗಳ ಅರ್ಥವನ್ನು ನಿರ್ಣಯಿಸಲು ಪೂರ್ವಮೀಮಾಂಸಾಶಾಸ್ತ್ರವು ಹಾಕಿಕೊಟ್ಟ ನಿಯಮ ಗಳನ್ನು ಅನುಸರಿಸುವುದು ತುಂಬ ಪ್ರಯೋಜನಕಾರಿಯಾಗುವುದು.

ಈ ಪೂರ್ವಮೀಮಾಂಸಾನ್ಯಾಯಗಳನ್ನು ಸಾಮಾನ್ಯವಾಗಿ ವೇದಾಂತದ ಎಲ್ಲ ಟೀಕಾ–ಟಿಪ್ಪಣಿಕಾರರೂ ಉಪಯೋಗಿಸುವರಾದರೂ ಇವುಗಳನ್ನು ಹೆಚ್ಚು ಸಂಖ್ಯೆ ಯಲ್ಲಿಯೂ ಅತಿ ಕುಶಲತೆಯಿಂದಲೂ ಶ್ರೀವ್ಯಾಸರಾಜರು ತಮ್ಮ ತಾತ್ಪರ್ಯ ಚಂದ್ರಿಕಾದಲ್ಲಿ ಉಪಯೋಗಿಸಿರುವರು. ಈ ನ್ಯಾಯಗಳನ್ನು ಮೂರು ಉದ್ದೇಶ ಗಳಿಗಾಗಿ ಉಪಯೋಗಿಸಿರುವರು.

೧. ತಮ್ಮ ವ್ಯಾಖ್ಯಾನದ-ಸಮರ್ಥನೆ.

೨. ಪರರ ವ್ಯಾಖ್ಯಾನದ ಖಂಡನೆ.
೩. ಮೀಮಾಂಸಾನ್ಯಾಯಗಳ ಸ್ವರೂಪವನ್ನೇ ನಿಷ್ಕೃಷ್ಟವಾಗಿ ನಿರ್ಣಯಿಸುವುದು.

ಶ್ರುತಿವಚನಗಳಿಗೆ ತಾವು ಮಾಡಿದ ವ್ಯಾಖ್ಯಾನವು ಪೂರ್ವಮೀಮಾಂಸಾನ್ಯಾಯಗಳು ಹಾಕಿಕೊಟ್ಟ ಅರ್ಥನಿರ್ಣಾಯಕ ತತ್ತ್ವಗಳಿಂದಲೂ ಸಮರ್ಥಿತವಾಗುತ್ತದೆ ಎಂದು ತೋರಿಸುವುದು ಮೊದಲನೆಯ ಉದ್ದೇಶ. ಪರಕೀಯರು ಮಾಡಿದ ವ್ಯಾಖ್ಯಾನವು ಪೂರ್ವಮೀಮಾಂಸಾ ನ್ಯಾಯಗಳಿಗೆ ಅನುಗುಣವಾಗಿಲ್ಲ ಎಂದು ತೋರಿಸುವುದು ಎರಡನೆಯ ಉದ್ದೇಶ. ಪೂರ್ವಮೀಮಾಂಸಕರಲ್ಲಿಯೂ ಕೆಲವು ಮತ-ಭೇದಗಳಿವೆ. ಶಾಬರಭಾಷ್ಯ ಕಾರರು. ವಾರ್ತಿಕಕಾರರು ಅಂದರೆ ಕುಮಾರಿಲಭಟ್ಟರು, ಶಾಸ್ತ್ರದೀಪಿಕಾಕಾರರು ಅಂದರೆ ಪಾರ್ಥಸಾರಥಿಮಿಶ್ರರು ಕೆಲವು ನ್ಯಾಯಗಳ ಸ್ವರೂಪವನ್ನು ಭಿನ್ನ ಭಿನ್ನವಾಗಿ ಹೇಳುತ್ತಾರೆ. ಅವುಗಳ ಉಪಯೋಗವನ್ನು ಭಿನ್ನ ಭಿನ್ನವಾಗಿ ತೋರಿಸುತ್ತಾರೆ. ಇಂಥ ಸಂದರ್ಭಗಳಲ್ಲಿ ಈ ನ್ಯಾಯಗಳನ್ನು ವೇದಾಂತದಲ್ಲಿ ಉಪಯೋಗಿಸಿಕೊಳ್ಳಬೇಕಾದರೆ ಇವುಗಳ ನಿಷ್ಕೃಷ್ಟ ಸ್ವರೂಪವನ್ನು ನಿರ್ಣಯಿಸಬೇಕಾಗುತ್ತದೆ. ಈ ಕಾರ್ಯವನ್ನು ಶ್ರೀ ವ್ಯಾಸರಾಜರು ಬಹಳ ಪಾಂಡಿತ್ಯಪೂರ್ಣವಾಗಿ ಮಾಡಿದ್ದಾರೆ. ಇವರು ಸಾಮಾನ್ಯವಾಗಿ ಶಾಬರಭಾಷ್ಯದ ಅಭಿಪ್ರಾಯವನ್ನೇ ಎತ್ತಿ ಹಿಡಿಯುತ್ತಾರೆ. ಅದ್ವೈತ ಮತ್ತು ವಿಶಿಷ್ಟಾದ್ವೈತ ವ್ಯಾಖ್ಯಾನಕಾರರು ಇಂಥ ಸಂದರ್ಭದಲ್ಲಿ ಈ ನ್ಯಾಯಗಳ ನಿಷ್ಕೃಷ್ಟ ಸ್ವರೂಪವನ್ನು ನಿರ್ಣಯಿಸದೆ ಶಬರಸ್ವಾಮಿ, ಕುಮಾರಿಲಭಟ್ಟ, ಪಾರ್ಥಸಾರಥಿಮಿಶ್ರ ಇವರಲ್ಲಿ ಯಾರ ಅಭಿಪ್ರಾಯವು ತಮಗೆ ಅನುಕೂಲವೋ ಅದನ್ನೇ ಉಪಯೋಗಿಸಿಕೊಳ್ಳುತ್ತಾರೆ. ಶ್ರೀವ್ಯಾಸರಾಜರು ಇದು ಅನುಚಿತ ಎಂಬದನ್ನು ತೋರಿಸಿ, ನಿಷ್ಕೃಷ್ಟ ಸ್ವರೂಪವನ್ನು ನಿರ್ಣಯಿಸಿ, ಈ ಮತದವರ ವ್ಯಾಖ್ಯಾನವನ್ನು ನಿರಾಕರಿಸುತ್ತಾರೆ. ಹೀಗೆ ಶ್ರೀವ್ಯಾಸರಾಜರು ವೇದಾಂತ ಶಾಸ್ತ್ರಕ್ಕೆ ಮೀಮಾಂಸಾ ನ್ಯಾಯಗಳನ್ನು ಉಪಯೋಗಿಸಿಕೊಳ್ಳುವುದಲ್ಲದೆ ಮೀಮಾಂಸಕರಲ್ಲಿಯೇ ಇರುವ ಅಭಿಪ್ರಾಯ ಭೇದಗಳನ್ನೂ ಬಗೆಹರಿಸುತ್ತಾರೆ.

ಶ್ರೀವ್ಯಾಸರಾಜರು ಆಯಾ ಸಂದರ್ಭಕ್ಕನುಸರಿಸಿ ಉಪಯುಕ್ತವಾದ ಪೂರ್ವಮೀಮಾಂಸಾನ್ಯಾಯಗಳನ್ನು ಉಲ್ಲೇಖಿಸಿ ಅವುಗಳನ್ನು ಮೇಲೆ ಹೇಳಿದ ಮೂರು ರೀತಿಗಳಲ್ಲಿ ಒಂದು ರೀತಿಯಿಂದ ಉಪಯೋಗವನ್ನು ತೋರಿಸುತ್ತಾರೆ. ಇಂಥ ಉಲ್ಲೇಖಗಳು ಸಂಕ್ಷಿಪ್ತವಾಗಿರುತ್ತವೆ. ಆಯಾ ಪೂರ್ವಮೀಮಾಂಸಾನ್ಯಾಯಗಳು ಉಭಯವಾದಿಗಳಿಗೂ ತಿಳಿದಿದ್ದನ್ನ ಗೃಹೀತವಾಗಿಟ್ಟುಕೊಂಡು ಅವುಗಳ ಪ್ರಕೃತೋಪಯೋಗವನ್ನು ಮಾತ್ರ ತೋರಿಸುತ್ತಾರೆ, ಆದರೆ ಮೀಮಾಂಸಾಶಾಸ್ತ್ರವನ್ನು ಓದದೇ ಇರುವ ವಾಚಕರಿಗೆ ಆ ನ್ಯಾಯಗಳ ಸ್ವರೂಪವು ತಿಳಿಯದೇ ಇರುವುದರಿಂದ ಅವುಗಳ ಪ್ರಕೃತೋಪಯೋಗವನ್ನು ಪೂರ್ಣವಾಗಿ ಅರ್ಥಮಾಡಿಕೊಳ್ಳುವುದು ಕಷ್ಟವಾಗುವದು. ಈ ಅನಾನುಕೂಲವನ್ನು ಪರಿಹರಿಸಿ ಅಂಥ ವಾಚಕರಿಗೆ ನೆರವಾಗಲು ಶ್ರೀ ರಾಘವೇಂದ್ರತೀರ್ಥರೂ ಮತ್ತು ಪಾಂಡುರಂಗಿ ಕೇಶವಭಟ್ಟಾರಕರೂ (ಗುರು

ರಾಜರು) ತಮ್ಮ ತಾತ್ಪರ್ಯಚಂದ್ರಿಕಾ ಟಿಪ್ಪಣಿಗಳಲ್ಲಿ ಸಂಬಂಧಪಟ್ಟ ಪೂರ್ವ ಮೀಮಾಂಸಾಧಿಕರಣಗಳ ಸಂಪೂರ್ಣ ವಿವರಗಳನ್ನು ಕೊಡುವರು. ಇದರಿಂದ ಆಯಾ ಪೂರ್ವಮೀಮಾಂಸಾನ್ಯಾಯಗಳ ಸ್ವರೂಪವು ಸ್ಪಷ್ಟವಾಗಿ ಅವುಗಳ ಪ್ರಕೃತೋಪ ಯೋಗವು ಮನದಟ್ಟಾಗುವುದು. ಹೀಗೆ ಸುಮಾರು ಒಂದು ನೂರು ಪೂರ್ವಮೀ ಮಾಂಸ ಅಧಿಕರಣಗಳ ಪೂರ್ಣ ವಿವರಗಳು ಪ್ರಕಾಶ ಮತ್ತು ಗುರುರಾಜೀಯ ಟಿಪ್ಪ ಣಿಗಳಲ್ಲಿ ಬಂದಿವೆ. ಈ ಅಧಿಕರಣಗಳಿಂದ ನಿಷ್ಪನ್ನವಾದ ಪೂರ್ವಮೀಮಾಂಸಾ ನ್ಯಾಯಗಳೆಲ್ಲ ತಾತ್ಪರ್ಯ ಚಂದ್ರಿಕಾದಲ್ಲಿ ಉಪಯೋಗಿಸಲ್ಪಟ್ಟಿವೆ. ಶ್ರೀವಿಜಯೀಂ ದ್ರತೀರ್ಥರು 'ಚಂದ್ರಿಕೋದಾಹೃತ-ಪೂರ್ವಮೀಮಾಂಸಾಧಿಕರಣ ನ್ಯಾಯಮಾಲಾ' ಎಂಬ ಗ್ರಂಥವನ್ನೇ ಬರೆದಿದ್ದರು. ಮಾದರಿಗಾಗಿ ಕೆಲವು ನ್ಯಾಯಗಳನ್ನು ಅವುಗಳ ಪ್ರಕೃತೋಪಯೋಗವನ್ನು ಈ ಕೆಳಗೆ ತೋರಿಸುವೆವು.

**ಯಜಮಾನ ಪ್ರಸ್ತರ ನ್ಯಾಯ**— 'ಯಜಮಾನಃ ಪ್ರಸ್ತರಃ' ಎಂಬ ವಾಕ್ಯದಲ್ಲಿ 'ಯಜಮಾನನೇ ಪ್ರಸ್ತರನು' ಎಂದು ಹೇಳಿದೆ. ಇದು ಹೊಂದುವುದಿಲ್ಲ. ಯಜ ಮಾನ ಅಂದರೆ ಯಜ್ಞವನ್ನು ಕೈಗೊಂಡವನು. ಪ್ರಸ್ತರ ಅಂದರೆ ಇದೀಗ ಕತ್ತರಿಸಿ ಯಜ್ಞದಲ್ಲಿ ಉಪಯೋಗಿಸಲು ತಂದ ಒಂದು ಮುಷ್ಟಿ ಹುಲ್ಲು. ಇವೆರಡೂ ಒಂದಾ ಗಲಾರವು. ಇವು ನಾಮಧೇಯವೆಂದೂ ಹೊಂದಿಸಲು ಬರುವುದಿಲ್ಲ. ಗುಣವಿಧಿ ಯೆಂದೂ ಹೊಂದಿಸಲು ಬರುವದಿಲ್ಲ. ಆದ್ದರಿಂದ ಇಲ್ಲಿ ಯಥಾಶ್ರುತ ಅರ್ಥವನ್ನು ತೆಗೆದುಕೊಳ್ಳದೆ ಪ್ರಸ್ತರವು ಯಜಮಾನ ಅಂದರೆ ಯಜಮಾನ ಕಾರ್ಯಕಾರಿಯು ಎಂದು ತೆಗೆದುಕೊಳ್ಳಬೇಕು. ಯಜಮಾನನು ಯಾಗದಲ್ಲಿ ಕೆಲವು ಕಾರ್ಯಗಳನ್ನು ನಿರ್ವಹಿಸುವಂತೆ ಪ್ರಸ್ತರವೂ ನಿರ್ವಹಿಸುವುದು ಎಂದು ಪ್ರಸ್ತರದ ಸ್ತುತಿಯನ್ನು ಮಾಡುವದೇ ಈ ವಾಕ್ಯದ ಉದ್ದೇಶವು. ಸಿಂಹೋ ಮಾಣವಕಃ ಎಂಬ ವಾಕ್ಯದಲ್ಲಿ ಮಾಣವಕನು ಸಿಂಹನೇ ಆಗಿದ್ದಾನೆ ಎಂಬ ಯಥಾಶ್ರುತಾರ್ಥವನ್ನು ಬಿಟ್ಟ ಮಾಣವ ಕನು ಸಿಂಹದಂತೆ ಶೂರನಾಗಿದ್ದಾನೆ ಎಂದು ತೆಗೆದುಕೊಳ್ಳುವಂತೆ ಇಲ್ಲಿಯೂ ತೆಗೆದು ಕೊಳ್ಳಬೇಕು. ಅಂದರೆ ಶ್ರುತಿಯಲ್ಲಿ ಹೇಳಿದ ಮಾತು ಪ್ರತ್ಯಕ್ಷಕ್ಕೆ ವಿರುದ್ಧವಾಗಿದ್ದರೆ ಆ ಶ್ರುತಿ-ವಚನವನ್ನು ಗೌಣ ಅಥವಾ ಲಾಕ್ಷಣಿಕವಾಗಿ ಅರ್ಥಮಾಡಬೇಕು ಎಂಬುದು ಈ ಯಜಮಾನ ಪ್ರಸ್ತರ ನ್ಯಾಯದ ಮಥಿತಾರ್ಥವು. ಮೀಮಾಂಸಕರು ಈ ನ್ಯಾಯ ವನ್ನು ಇಟ್ಟುಕೊಂಡು ಅನೇಕ ಕಡೆ ಶ್ರುತಿಗೆ ಪ್ರತ್ಯಕ್ಷ ವಿರೋಧ ಬಂದಾಗ ಉಪ ಚರಿತಾರ್ಥವನ್ನು ಮಾಡಿರುವರು.

ಈ ಮೀಮಾಂಸಾನ್ಯಾಯವನ್ನು ತಾತ್ಪರ್ಯ ಚಂದ್ರಿಕಾದಲ್ಲಿ ಶ್ರೀವ್ಯಾಸರಾಜರು ಜಿಜ್ಞಾಸಾಧಿಕರಣದಲ್ಲಿ ಅದ್ವೈತ ಮತದ ಪೂರ್ವಪಕ್ಷ-ಸಿದ್ಧಾಂತಗಳನ್ನು ನಿರಾಕರಿಸಲು ಉಪಯೋಗಿಸಿರುವರು. ಅದ್ವೈತ ಮತದ ಪ್ರಕಾರ ಪೂರ್ವಪಕ್ಷ ಹೀಗಿದೆ— ಪ್ರತ್ಯಗಾತ್ಮನೇ ಬ್ರಹ್ಮನಾದ್ದರಿಂದ, ಈ ಪ್ರತ್ಯಗಾತ್ಮನು ಅಂದರೆ ಜೀವನು 'ಅಹಮ್' ಎಂದು ತಿಳಿದೇ ಬರುವವನಾದ್ದರಿಂದ, ಇವನ ಜಿಜ್ಞಾಸೆ ಅಗತ್ಯವಿಲ್ಲ.

'ಅಹಮ್' ಎಂದುತಿಳಿದು ಬರುವವನು ಕರ್ತಾ ಭೋಕ್ತಾ ಆಗಿರುವನು. ವೇದಾಂತ ದಿಂದ ತಿಳಿದು ಕೊಳ್ಳಬೇಕಾದ ಬ್ರಹ್ಮನು ಇವು ಇಲ್ಲದವನು. ಆದ್ದರಿಂದ ಜಿಜ್ಞಾಸೆ ಆಗತ್ಯ ಎನ್ನಲು ಬರುವುದಿಲ್ಲ. ಯಾಕಂದರೆ 'ಅಹಮ್' ಎಂಬ ಅನುಭವವು ಪ್ರತ್ಯಕ್ಷವಾಗಿದ್ದು ಪ್ರಬಲವಾಗಿದೆ. ಆದ್ದರಿಂದ ಶ್ರುತಿಗೇ ಉಪಚರಿತ ಅರ್ಥಮಾಡಿ ಪ್ರತ್ಯಕ್ಷವನ್ನೇ ಒಪ್ಪಬೇಕು. ಆದ್ದರಿಂದ ಜಿಜ್ಞಾಸೆ ಅಗತ್ಯವಿಲ್ಲ- ಎಂಬುದು ಅದ್ವೈತಿ ಗಳು ಮಾಡಿ ಕೊಂಡ ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಉತ್ತರ ಕೊಡುತ್ತಾ ಅದ್ವೈತಿಗಳು — ಪ್ರತ್ಯಕ್ಷವು ದೋಷ ಪೂರ್ಣವಾಗಿರುವ ಸಂಭವವಿರುವುದರಿಂದ ಶ್ರುತಿಯು ನಿರ್ದುಷ್ಟವಾದ್ದರಿಂದ ಶ್ರುತಿ ಯಿಂದ ಪ್ರತ್ಯಕ್ಷವೇ ಬಾಧಿತವಾಗುವುದು. ಆದ್ದರಿಂದ ಕರ್ತಾ, ಭೋಕ್ತಾ ಆದ ಪ್ರತ್ಯಗಾತ್ಮನು ಪ್ರತ್ಯಕ್ಷದಿಂದ ತಿಳಿದು ಬಂದಿದ್ದರೂ ಶುದ್ಧ ಬ್ರಹ್ಮನು ತಿಳಿದು ಬಂದಿಲ್ಲ. ಆದ್ದರಿಂದ ಬ್ರಹ್ಮ ಜಿಜ್ಞಾಸೆ ಅಗತ್ಯ ಎಂದು ಸಿದ್ಧಾಂತ—ಮಾಡುವರು.

ಆದರೆ ಈ ಪೂರ್ವಪಕ್ಷ ಸಿದ್ಧಾಂತಗಳು 'ಯಜಮಾನ ಪ್ರಸ್ತರ' ನ್ಯಾಯಕ್ಕೆ ವಿರುದ್ಧವಾಗಿವೆ. ಯಜಮಾನ ಪ್ರಸ್ತರ ನ್ಯಾಯದಲ್ಲಿ ಶ್ರುತಿಗೂ ಪ್ರತ್ಯಕ್ಷಕ್ಕೂ ವಿರೋಧ ಬಂದಾಗ ಶ್ರುತಿಗೇ ಉಪಚರಿತಾರ್ಥವನ್ನು ಮಾಡಬೇಕೆಂದು ಹೇಳಿದೆ. ಅಲ್ಲದೆ 'ತತ್ವಮಸಿ' ಶ್ರುತಿಯ ಅರ್ಥವನ್ನು ಮಾಡುವಾಗ ಅಲ್ಪಜ್ಞ, ದುಃಖೀ 'ತ್ವಮ್' ಪದಾರ್ಥನಾದ ಜೀವಕ್ಕೂ ಸರ್ವಜ್ಞ, ಸರ್ವಶಕ್ತ 'ತತ್' ಪದಾರ್ಥ ಈಶ್ವರ ನಿಗೂ ಐಕ್ಯವನ್ನು ಹೇಳುವುದು ಪ್ರತ್ಯಕ್ಷ ವಿರುದ್ಧವಾದ್ದರಿಂದ ಅಲ್ಲಿ ಲಕ್ಷಣಾಮಾಡ ಬೇಕೆಂದು 'ಅದ್ವೈತಿಗಳೇ ಹೇಳಿರುವರು. ಆದ್ದರಿಂದ ಅವರು ಅಲ್ಲಿ 'ಯಜಮಾನ ಪ್ರಸ್ತರ' ನ್ಯಾಯವನ್ನು ಒಪ್ಪಿರುವರು. ಇಲ್ಲಿ ಅದಕ್ಕೆ ವಿರುದ್ಧವಾಗಿ ಹೇಳುತ್ತಿರು ವರು. ಆದ್ದರಿಂದ ಅದ್ವೈತಿಗಳ ಪೂರ್ವಪಕ್ಷ ಸಿದ್ಧಾಂತ ಸರಿಯಿಲ್ಲ ಎಂದು ತೋರಿ ಸಲು ಈ ನ್ಯಾಯವನ್ನು ಉಪಯೋಗಿಸಿರುವರು,

## 'ಋತಂ ಪಿಬಂತೌ' ಎಂಬಲ್ಲಿ ಪೂರ್ವಮೀಮಾಂಸಾನ್ಯಾಯಗಳಿಂದ ದ್ವಿವಚನದ ಸಮರ್ಥನೆ

ಗುಹಾಧಿಕರಣದಲ್ಲಿ 'ಋತಂ ಪಿಬಂತೌ ಸುಕೃತ ಸ್ಯಲೋಕೇ' ಇತ್ಯಾದಿ ಶ್ರುತಿ ಯನ್ನು ವಿಚಾರಿಸಿ ಪರಮಾತ್ಮನ ಆತ್ಮಾ, ಅಂತರಾತ್ಮಾ ಎಂಬ ಎರಡು ರೂಪಗಳು ಹೃದಯ ಗುಹೆಯಲ್ಲಿವೆ ಎಂದು ಹೇಳುವದಾದರೆ 'ಪಿಬತೌ' ಎಂದು ದ್ವಿವಚನ ಪ್ರಯೋಗ ಮಾಡಿದ್ದು ಸರಿಯೇ ಎಂಬ ಪ್ರಶ್ನೆಯುಂಟಾಗುತ್ತದೆ. ಇದನ್ನು ಶ್ರೀ ವ್ಯಾಸರಾಜರು ಅನೇಕ ಪೂರ್ವಮೀಮಾಂಸಾನ್ಯಾಯಗಳನ್ನು ಉಲ್ಲೇಖಿಸಿ ಸಮರ್ಥಿಸಿ ದ್ದಾರೆ.

೧. ಪೂರ್ವಮೀಮಾಂಸಾದ ಒಂಬತ್ತನೆಯ ಅಧ್ಯಾಯದ ಮೂರನೆಯ ಪಾದದ ಹನ್ನೆರಡನೆಯ ಅಧಿಕರಣದಲ್ಲಿ ಜ್ಯೋತಿಷ್ಟೋಮ ಯಾಗದಲ್ಲಿ ಬರುವ 'ಮೇಧಪತಯೇ ಮೇಧಮ್' 'ಮೇಧಪತಿಭ್ಯಾಂ ಮೇಧಮ್' ಎಂಬ ಮಂತ್ರಗಳಲ್ಲಿ ಅಗ್ನಿಷ್ಟೋಮ ದೇವತೆಗಳನ್ನು ಕುರಿತು ಒಂದು ಕಡೆಗೆ ಏಕವಚನವನ್ನೂ ಇನ್ನೊಂದು ಕಡೆಗೆ ದ್ವಿವಚನವನ್ನೂ ಪ್ರಯೋಗಿಸಲಾಗಿದೆ. ಇದನ್ನು ಹೇಗೆ ನಿರ್ವಹಿಸಬೇಕು ಎಂಬುದನ್ನು ವಿಚಾರಮಾಡಿ ಅಗ್ನಿಷ್ಟೋಮರಿಬ್ಬರೂ ಈ ಯಾಗದ ದೇವತೆ ಎಂದು ಒಬ್ಬರೇ ಆಗಿದ್ದಾರೆ. ಆದರೆ ಈ ದೇವತಾತ್ವವು ಇಬ್ಬರಲ್ಲಿದೆ. ಆದ್ದರಿಂದ ಎರಡೂ ಪ್ರಯೋಗಗಳು ಸರಿ ಎಂದು ಸಮರ್ಥಿಸಿದ್ದಾರೆ. ಹೀಗೆಯೇ ಪ್ರಕೃತದಲ್ಲಿ ಪರಮಾತ್ಮನು ಸ್ವರೂಪತಃ ಒಬ್ಬನಾದರೂ ರೂಪ ವಿಶೇಷಗಳಿಂದ ಎರಡು ರೂಪಗಳಿಂದ ಹೃದಯ ಗುಹೆಯಲ್ಲಿ ಇರುವುದರಿಂದ ಈ ಎರಡು ರೂಪಗಳನ್ನು ಹೇಳುವ ಉದ್ದೇಶದಿಂದ ದ್ವಿವಚನವಿರುವುದು ಸರಿ ಎಂದು ಶ್ರೀವ್ಯಾಸರಾಜರು ವಿವರಿಸಿದ್ದಾರೆ.

೨. 'ಅದಿತಿಃ ಪಾಶಾನ್' ಎಂಬ ಶ್ರುತ್ಯರ್ಥವನ್ನು ವಿವರಿಸುವಾಗ 'ಪಾಶಾನ್' ಎಂದು ಬಹುವಚನವಿದ್ದರೂ ಒಂದೇ ಪಾಶವೆಂದು ಮೀಮಾಂಸಕರು ಅರ್ಥ ಮಾಡುತ್ತಾರೆ. ಹೀಗೆ ಒಬ್ಬನೇ ಪರಮಾತ್ಮನನ್ನು ಕುರಿತು ಎರಡು ರೂಪಗಳನ್ನು ಉಲ್ಲೇಖಿಸಲು ದ್ವಿವಚನ ಪ್ರಯೋಗವು ಬರಬಹುದು ಎಂಬ ಇನ್ನೊಂದು ನಿದರ್ಶನವನ್ನೂ ಪೂರ್ವಮೀಮಾಂಸಾಶಾಸ್ತ್ರದಿಂದ ಕೊಡುತ್ತಾರೆ.

೩. ದರ್ಶಪೂರ್ಣಮಾಸದಲ್ಲಿ ಬರುವ 'ಪತ್ನೀಂ ಸನ್ನಹ್ಯ' ಎಂಬ ಮಂತ್ರವನ್ನು ದ್ವಿಪತ್ನೀಕ ಮತ್ತು ಬಹುಪತ್ನೀಕ ಪ್ರಯೋಗಗಳಲ್ಲಿ ಉಪಯೋಗಿಸುವಾಗ ಸಂಖ್ಯೆಯನ್ನು ಹೇಗೆ ಹೊಂದಿಸಿಕೊಳ್ಳಬೇಕು ಎಂಬ ಪ್ರಶ್ನೆ ಬಂದಾಗ ಏಕವಚನಾಂತವಾಗಿಯೇ ಪತ್ನೀ ಪದವನ್ನಿಟ್ಟು ಒಬ್ಬೊಬ್ಬ ಪತ್ನಿಗೂ ಪ್ರತ್ಯೇಕವಾಗಿ ಅನ್ವಯಿಸುವಂತೆ ಪ್ರಯೋಗಿಸಬಹುದು ಎಂದು ಪೂರ್ವಮೀಮಾಂಸಕರು ಹೇಳುತ್ತಾರೆ. ಇದರಿಂದ ಅಲ್ಲಲ್ಲಿಯ ಸಂದರ್ಭಕ್ಕನುಸರಿಸಿ ಸಂಖ್ಯೆಯನ್ನು ಯಥಾಯೋಗ್ಯವಾಗಿ ಹೊಂದಿಸಿಕೊಳ್ಳಬೇಕೆಂದು ಸ್ಪಷ್ಟವಾಗುತ್ತದೆ. ಪ್ರಕೃತದಲ್ಲಿಯೂ ಪರಮಾತ್ಮನು ಒಬ್ಬನೇ, ಅವನ ರೂಪಗಳು ಎರಡು ಎಂಬುದೇ ಮುಖ್ಯವಾದುದು. ದ್ವಿವಚನವಿರುವ ಮಾತ್ರದಿಂದ ಪರಮಾತ್ಮನ ಏಕತ್ವಕ್ಕೆ ಚ್ಯುತಿಯಿಲ್ಲ. ಅಥವಾ ಪರಮಾತ್ಮನು ಒಬ್ಬನೇ ಆದ್ದರಿಂದ ರೂಪಗಳ ದೃಷ್ಟಿಯಿಂದಲೂ ದ್ವಿವಚನವನ್ನು ಪ್ರಯೋಗಿಸಲು ಬರುವುದಿಲ್ಲ ಎನ್ನುವಂತಿಲ್ಲ.

೪. ಸಂಖ್ಯೆಯು ಉದ್ದೇಶ ವಿಶೇಷಣವಾಗಿದ್ದಾಗ ವಿವಕ್ಷಿತವೋ ವಿಧೇಯ ವಿಶೇಷಣವಾಗಿದ್ದಾಗ ವಿವಕ್ಷಿತವೋ ಎಂಬ ವಿಷಯದಲ್ಲಿ ಮೀಮಾಂಸಕರ ಅಭಿಪ್ರಾಯವನ್ನು ವಿಶ್ಲೇಷಿಸಿ ಶ್ರೀವ್ಯಾಸರಾಜರು ಉದ್ದೇಶ ಅಥವಾ ವಿಧೇಯ ವಿಶೇಷಣವಾಗಿರುವದು ಮುಖ್ಯವಲ್ಲ. ಆದರೆ ನಿರ್ಣೀತವಾದದ್ದಕ್ಕೆ ವಿರುದ್ಧವಾದ ರೀತಿಯಲ್ಲಿ ಸಂಖ

ಯ ಉಲ್ಲೇಖವಿದ್ದಾಗ ಅವಿವಕ್ಷಿತವಾಗುತ್ತದೆ ಎಂಬುದನ್ನು ತೋರಿಸಿಕೊಟ್ಟಿದ್ದಾರೆ. ಉದ್ದೇಶ ವಿಶೇಷಣವಾಗಿದ್ದಾಗಲೂ ಅವಿವಕ್ಷಿತವಾದ ಕೆಲವು ನಿದರ್ಶನಗಳನ್ನೂ ವಿಧೇಯ ವಿಶೇಷಣವಾಗಿದ್ದಾಗಲೂ ಅವಿವಕ್ಷಿತವಾದ ಕೆಲವು ನಿದರ್ಶನಗಳನ್ನೂ ಮೀಮಾಂಸಕರ ಪ್ರಯೋಗಗಳಿಂದಲೇ ತೋರಿಸಿದ್ದಾರೆ.

ಹೀಗೆ ಗುಹಾಧಿಕರಣದಲ್ಲಿ ದ್ವಿವಚನ ಪ್ರಯೋಗದ ವಿಚಾರಮಾಡುವಾಗ ಅನೇಕ ಪೂರ್ವಮೀಮಾಂಸಾನ್ಯಾಯಗಳ ಸಂಚಾರವನ್ನು ತೋರಿಸಿದ್ದಾರೆ.

**ಉಪಸಂಹಾರ ಪ್ರಾಬಲ್ಯ**— ಸಮನ್ವಯಾಧಿಕರಣದಲ್ಲಿ ಉಪಕ್ರಮಾದಿಗಳು ತಾತ್ಪರ್ಯ ನಿರ್ಣಯಮಾಡಲು ಸಹಾಯಕವಾಗುವವೇ ಇಲ್ಲವೇ ಎಂಬ ಪ್ರಶ್ನೆಯನ್ನು ಎತ್ತಿಕೊಂಡು ಅನೇಕ ಪೂರ್ವಮೀಮಾಂಸಾ ಅಧಿಕರಣಗಳನ್ನು ವಿಶ್ಲೇಷಿಸಿ ಉಪಕ್ರಮಾದಿಗಳು ತಾತ್ಪರ್ಯ ನಿರ್ಣಾಯಕಗಳು ಎಂದು ನಿರ್ಧರಿಸಿದ್ದಾರೆ. ಉದಾಹರಣೆಗೆ ಅಶ್ವಪ್ರತಿಗ್ರಹೇಷ್ಟಿಯನ್ನು ಅಶ್ವಗಳನ್ನು ಕೊಟ್ಟವನು ಮಾಡಬೇಕೆಂದು ಉಪಕ್ರಮದಲ್ಲಿ ಹೇಳಿದೆ. ತೆಗೆದುಕೊಂಡವನು ಮಾಡಬೇಕೆಂದು ಉಪಸಂಹಾರದಲ್ಲಿ ಹೇಳಿದೆ. ಹೀಗೆ ಭಿನ್ನ ಭಿನ್ನವಾದದ್ದನ್ನು ಹೇಳಿದ್ದರಿಂದ ಉಪಕ್ರಮ, ಉಪಸಂಹಾರ ಇವೆರಡೂ ತಾತ್ಪರ್ಯ ನಿರ್ಣಾಯಕಗಳಲ್ಲ ಎಂದು ಆಕ್ಷೇಪ ಮಾಡಿ ಇಲ್ಲಿ ಉಪಕ್ರಮ ಉಪಸಂಹಾರಗಳ ಪ್ರಶ್ನೆಯೇ ಇಲ್ಲ ಈ ಇಷ್ಟಿಯು ಕರ್ಮಾಂಗವಾದದ್ದು ಆದ್ದರಿಂದ ಪ್ರಧಾನ ಕರ್ಮವನ್ನು ಕೈಕೊಂಡವನೇ ಈ ಇಷ್ಟಿಯನ್ನು ಮಾಡಬೇಕು ಎಂದು ನಿರ್ಣಯಿಸಿದ್ದಾರೆ. ಇದರಂತೆಯೇ ವೇದೋಪಕ್ರಮಾಧಿಕರಣವನ್ನು ವಿಶ್ಲೇಷಿಸಿ ಅದು ಉಪಸಂಹಾರ ಪ್ರಾಬಲ್ಯಕ್ಕೆ ಬಾಧಕವಲ್ಲ ಎಂದು ತೋರಿಸಿದ್ದಾರೆ. ಅಪಚ್ಛೇದಾಧಿಕರಣವನ್ನೂ ಅನೇಕ ಕಡೆಗೆ ಉಪಯೋಗಿಸಿಕೊಂಡಿದ್ದಾರೆ.

ಹೀಗೆ ಶ್ರೀವ್ಯಾಸರಾಜರು ತಾತ್ಪರ್ಯ ಚಂದ್ರಿಕಾದಲ್ಲಿ ಮೀಮಾಂಸಾ ನ್ಯಾಯಗಳನ್ನು ವಿಪುಲವಾಗಿ ಉಪಯೋಗಿಸಿದ್ದಾರೆ. ಇವುಗಳಲ್ಲಿ ಅನೇಕ ನ್ಯಾಯಗಳನ್ನು ಭಾಮತೀಕಾರರೂ ಉಪಯೋಗಿಸಿದ್ದಾರೆ. ಆದರೆ ಅವು ಭಾಮತೀಕಾರರ ವ್ಯಾಖ್ಯಾನಕ್ಕೆ ಅನುಕೂಲವಾಗಿರದೆ ಪ್ರತಿಕೂಲವಾಗಿರುವುದನ್ನೇ ಶ್ರೀವ್ಯಾಸರಾಜರು ಅಲ್ಲಲ್ಲಿ ಎತ್ತಿತೋರಿಸಿದ್ದಾರೆ. ಈ ಚರ್ಚೆ ವೇದಾಂತ ಶಾಸ್ತ್ರದವರಿಗೆ ಮಾತ್ರವಲ್ಲದೆ ಮೀಮಾಂಸಾ ಶಾಸ್ತ್ರದವರಿಗೂ ಉಪಯುಕ್ತವಾಗಿದೆ. ಆಧುನಿಕ ಭಾಷಾಶಾಸ್ತ್ರದ ಅಧ್ಯಯನದಲ್ಲಿ Communication ಅಂದರೆ ಭಾಷೆಯು ಸಂಪರ್ಕ ಮಾಧ್ಯಮವಾಗಿರುವ ವಿಷಯದಲ್ಲಿ ಆಳವಾದ ಸಂಶೋಧನೆ ನಡೆಯುತ್ತಿದೆ. ಈ ವಿಷಯದಲ್ಲಿ ಮೀಮಾಂಸಾನ್ಯಾಯಗಳಲ್ಲಿ ಬಂದ ತತ್ತ್ವಗಳು ಬಹಳ ಉಪಯುಕ್ತವಾಗಿವೆ.

o o o

# ಚಂದ್ರಿಕಾದಲ್ಲಿ ಲೌಕಿಕ ದೃಷ್ಟಾಂತ

_ವಿದ್ಯಾಧೀಶತೀರ್ಥರು. ಫಲಿಮಾರು ಕಿರಿಯ ಶ್ರೀಪಾದರು

ಶ್ರೀವ್ಯಾಸರಾಜ ಸ್ವಾಮಿಗಳ ಮುಖಚಂದ್ರದಿಂದ ಹೊರಹೊಮ್ಮಿದ "ತಾತ್ಪರ್ಯ ಚಂದ್ರಿಕಾ" ಗ್ರಂಥವು ಸಹೃದಯರ ಹೃದಯಕ್ಕೆ ಆಹ್ಲಾದವನ್ನು ನೀಡುತ್ತಿದೆ. ಆದುದರಿಂದ ಚಂದ್ರಿಕೆಯೆಂಬ ಹೆಸರು ಅನ್ವರ್ಥಕ. ಚಂದ್ರಿಕೆಯೆಂದರೆ ಸಜ್ಜನರಿಗೆ ಸಂತೋಷವನ್ನು ನೀಡಬಲ್ಲ ಬೆಳದಿಂಗಳು. ಈ ಚಂದ್ರಿಕೆಯ ಬೆಳಕು ಪ್ರತಿಯೊಂದು ಪ್ರಮೇಯದ ಸೂಕ್ಷ್ಮ ಅತಿಸೂಕ್ಷ್ಮ ಕಣಗಳನ್ನು ಪ್ರಕಾಶಗೊಳಿಸುತ್ತಿದೆ. ಇತರ ಚಂದ್ರಿಕೆಯ ಬೆಳಕಿನಂತೆ ಅಂಧಕಾರ ನಿರಾಸ ಮಾತ್ರವಲ್ಲ. ಕತ್ತಲೆಯ ಸಂಪೂರ್ಣ ಸ್ವರೂಪ ನಿರ್ಣಾಯಕವೂ ಹೌದು. ಸೂತ್ರಕಾರರ ಸಿದ್ಧಾಂತಕ್ಕನುಗುಣವಾದ ಪೂರ್ವ ಪಕ್ಷದ (ಕತ್ತಲೆ) ಪ್ರಾಬಲ್ಯವನ್ನು ಉಪಪಾದಿಸುವುದರಲ್ಲಿ ಪಳಗಿದ ಹಸ್ತ ವ್ಯಾಸರಾಜರದು. ಪೂರ್ವ ಪಕ್ಷವನ್ನು ಮಂಡಿಸುವ ಅವರ ವಾದಸರಣಿಯತ್ತ ದೃಷ್ಟಿ ಹಾಯಿಸಿದಾಗ "ಶ್ರೀವೇದವ್ಯಾಸ ದೇವರ ಸೂತ್ರವೂ ಸಮರ್ಪಕ ಪರಿಹಾರ ಸೂಚಿಸಬಲ್ಲುದೆ !" ಎನ್ನುವಷ್ಟು ದಿಗ್ಭ್ರಮೆಗೊಳಗಾಗುತ್ತೇವೆ. ಸೂತ್ರವೆಂಬ ಪಕ್ಷಿಯ ಒಂದು (ಪಕ್ಷ) ರೆಕ್ಕೆ ಸಿದ್ಧಾಂತವಾಗಿದ್ದರೆ ಮತ್ತೊಂದು ರೆಕ್ಕೆ ಪೂರ್ವಪಕ್ಷವಾಗಿದೆ. ದುರ್ಬಲ ಸಮಸ್ಯೆಗೆ ಪ್ರಬಲವಾದ ಪರಿಹಾರ ಅನಾವಶ್ಯಕ ತಾನೆ ?

ಜಗತ್ತಿನ ಸೃಷ್ಟಿಯನ್ನು ಆಕ್ಷೇಪಿಸುವ ಸಂದರ್ಭ. ಪರಮಾತ್ಮನಿಗೆ ಪ್ರಪಂಚದ ಸೃಷ್ಟಿ ಮಾಡುವಾಗ ಪ್ರಯೋಜನದ ಅಭಿಲಾಷೆ ಇದೆಯೇ ಇಲ್ಲವೇ ? ಎರಡಕ್ಕೂ ಉತ್ತರ ಸಿಗಲಾರದು. ಪ್ರಯೋಜನದ ಅಪೇಕ್ಷೆ ಇದ್ದರೆ ಆ ಪ್ರಯೋಜನ ಈಗ ದೇವರಿಗೆ ಲಭಿಸಿಲ್ಲವೆಂದಾಯಿತು. ತನ್ನಲ್ಲಿ ಇಲ್ಲದ ವಸ್ತುವಿನ ಬಗ್ಗೆ ತಾನೆ ಅಪೇಕ್ಷೆ. ಆ ಕಾರಣದಿಂದ ಪರಮಾತ್ಮನಿಗೆ ಲಭಿಸದ ವಸ್ತುವಿನ ಕೊರತೆಯಿದೆ ಎನ್ನಬೇಕು. ಹೀಗಿರುವಾಗ ಆತನಿಗೆ ಪರಿಪೂರ್ಣತೆ ಎಂಬ ಸೃಷ್ಟಿಗೆ ಪ್ರಯೋಜಕವಾದ, ದೇವೋತ್ತಮನ ಲಕ್ಷಣವೇ ಇಲ್ಲವೆಂದಾಗುವುದು.

ಪ್ರಯೋಜನದ ಅಭಿಲಾಷೆ ಇಲ್ಲದೆ ಯಾರೂ ಯಾವ ಕೆಲಸದಲ್ಲೂ ಆಸಕ್ತರಾಗಲಾರರು. ಬ್ರಹ್ಮಾಂಡ ಸೃಷ್ಟಿಯಂತಹ ಮಹಾ ಸಾಧನೆಯಲ್ಲಿ ಹೇಗೆ ತಾನೆ ಪ್ರವೃತ್ತಿ

ಯಾದೀತು ? ನದಿ ಯಾವ ಪ್ರಯೋಜನದ ಕಡೆಗೂ ದೃಷ್ಟಿ ಹರಿಸದೆ ನಿಮ್ನ ಪ್ರದೇಶಕ್ಕೆ ಹರಿಯುವ ಸ್ವಭಾವವುಳ್ಳಂತೆ, ಅಗ್ನಿಯು ನಿರಪೇಕ್ಷವಾಗಿ ನಿರಂತರ ಮೇಲ್ಮುಖವಾಗಿ ಜ್ವಲಿಸುವಂತೆ ಪರಮಾತ್ಮನೂ ಯಾವ ಅಭಿಲಾಷೆಯೂ ಇಲ್ಲದೆ ಸೃಷ್ಟಿಯ ಸ್ವಭಾವವುಳ್ಳವನೇಕೆ ಆಗಬಾರದು ಎಂಬ ಸಮಾಧಾನ ಸರಿಯಿಲ್ಲ. ನದೀ ಅಥವಾ ಬೆಂಕಿ, ಜ್ಞಾನಶೂನ್ಯ, ಜಡ. ಅವುಗಳಿಗೆ ಪ್ರಯೋಜನದ ಅಪೇಕ್ಷೆ ಇರಲಾರದು. ಪರಮಾತ್ಮ ಚೇತನ ತಾನೆ ? ಉನ್ಮತ್ತನು ಲಾಭ ಪರಾಙ್ಮುಖನಾಗಿ ಗಾನ ವಿನೋದಗಳಲ್ಲಿ ಆಸಕ್ತನಾದಂತೆ, ಪರಮಾತ್ಮನ ಪ್ರವೃತ್ತಿಯೂ ಪ್ರಯೋಜನ ಪರಾಙ್ಮುಖವಾಗ ಬಹುದಲ್ಲವೇ ಎಂಬ ಹೋಲಿಕೆಯೂ ಸರಿಯಲ್ಲ. ವಿವೇಚನಾ ಶಕ್ತಿ ಶೂನ್ಯನಾದ ಉನ್ಮತ್ತನಿಗೂ ವಿವೇಕಿಯಾದ ದೇವರಿಗೂ ಹೋಲಿಕೆಯೆ ? ವಿವೇಕಿಗಳೂ ಕೃಪೆಯಿಂದ - ಲಾಭದ ಗೃಧ್ರ ದೃಷ್ಟಿಯಿಲ್ಲದೆಯೇ ಕಾರ್ಯ ತತ್ಪರ ರಾಗುತ್ತಾರೆ. ಕೃಪಾ ಪೂರ್ಣನಾದ ಶ್ರೀಹರಿಯು ದಯೆಯಿಂದಲೇ ಸೃಷ್ಟಿ ಮಾಡ ಬಲ್ಲ ಎನ್ನುವ ವಾದವೂ ವಿವಾದ ಗ್ರಸ್ತ. ಕೃಪೆಯಿಂದ ದೇವರಿಗೆ ಸಾಧಿಸಬೇಕಾದದ್ದೇ ನಿದೆ ? ಧರ್ಮವೇ, ಪ್ರೀತಿಯೇ, ಜನಾನುರಾಗವೇ ? ವಿವೇಕಿಯಾದ ಹಾಗೂ ಪರಿಪೂರ್ಣನಾದ ಪರಮಾತ್ಮ ಪ್ರಪಂಚ ಉತ್ಪಾದಕ, ಪಾಲಕ ಎಂಬ ಮಾತು ಅರ್ಥ ರಹಿತ. ಈ ರೀತಿಯಾಗಿ ಪೂರ್ವ ಪಕ್ಷವನ್ನು ಪರಿಹರಿಸಲು ಅಸಾಧ್ಯ ಎನ್ನುವಷ್ಟು ಎತ್ತರಕ್ಕೇರಿಸಿ, ಪೂರ್ವಪಕ್ಷದ ಅಂಧಕಾರವನ್ನು, ಬೆಳಕು ಹರಿಸಿ, ಸುಸ್ಪಷ್ಟಗೊಳಿ ಸಿದ ಪ್ರೌಢಿಮೆ ವ್ಯಾಸರಾಜರದ್ದು.

ಸೂತ್ರ ಸೂಚಿತ ಉತ್ತರವೂ ಅತಿಸುಂದರ, ಶ್ರುತಿ ಮಾತೆ "ದೇವಸ್ಯೈಷ ಸ್ವಭಾವೋಽಯಂ" ಎಂಬುದಾಗಿ ಸೃಷ್ಟಿ ಪರಮಾತ್ಮನ ಸ್ವಭಾವ ಎಂದಿದ್ದಾಳೆ. ಪ್ರವೃತ್ತಿಯು ಸ್ವಾಭಾವಿಕವಾಗಿದ್ದರೆ ಪ್ರಯೋಜನದ ಪ್ರಶ್ನೆ ಉಳಿಯಲಾರದು.

''ಸ್ವಾಭಾವಿಕ ನಿಮೇಷಾದ್ಯಾಃ ನಹ್ಯದೃಷ್ಟ ಪ್ರಯೋಜನಾಃ" (ಚಂದ್ರಿಕಾ) ಚೇತನರಾದ ನಾವು ನಿರರ್ಥಕವಾಗಿ ಕ್ಷಣ ಕ್ಷಣಕ್ಕೂ ಕಣ್ಣು ಮುಚ್ಚುತ್ತೇವೆ, ತೆರೆಯು ತ್ತೇವೆ. ಇದು ನಮ್ಮ ಸ್ವಭಾವ. ಅದರಂತೆ ಜಗತ್ ಸೃಷ್ಟಿ ಪ್ರಯೋಜನದ ಆಶೆ ಶೂನ್ಯನಾದ ಭಗವಂತನ ಸ್ವಭಾವವಾಗಬಹುದು.

"ಗಾನ ವ್ಯಾಖ್ಯಾನ ಪೂರ್ವೇಷು ಶಿರೋಹಸ್ತಾದಿ ಚೇಷ್ಟಿತಮ್" (ಚಂದ್ರಿಕಾ) ಸುಶ್ರಾವ್ಯವಾಗಿ ಹಾಡಿದಾಗ ಮೈಮರೆತು ತಲೆಯಾಡಿಸುತ್ತೇವೆ. ಪ್ರವಚನ ಮಾಡು ವಾಗ ಬೆರಳು ಆಡಿಸುತ್ತೇವೆ. ಶಿರಃಕಂಪನ ಮಾಡುತ್ತೇವೆ. ಸುಮ್ಮನೆ ಕೂತಾಗ ಬೆನ್ನು ಉಯ್ಯಾಲೆಯಾಡಿಸುತ್ತೇವೆ. ಇದೆಲ್ಲಾ ಪ್ರಯೋಜನದ ಅಭಿಲಾಷಾಲೇಶವೂ ಇಲ್ಲದೆ ಆಗುವ ಸ್ವಾಭಾವಿಕ ಕ್ರಿಯೆಗಳಲ್ಲವೆ ? ಅದೇ ರೀತಿ ಪರಮಾತ್ಮನೂ ಪ್ರಯೋ ಜನ ಅಭಿಲಾಷೆ ಇಲ್ಲದವನು.

"ವಾಸ್ರಾದಿರಿವ ವತ್ಸಾದೌದಯಯೈವ ಪ್ರವರ್ತತೇ'' (ಚಂದ್ರಿಕಾ) ದನಗಳು

ಯಾವ ಪ್ರಯೋಜನದ ಆಕಾಂಕ್ಷೆ ಇಲ್ಲದೆ ಚಿಕ್ಕ ಕರುವಿನ ಕಡೆಗೆ ದಯೆಯಿಂದಲೇ ಪ್ರವೃತ್ತಿ ಮಾಡುವುದು ಎಲ್ಲರಿಗೂ ವಿದಿತ. ಮಾನವನಾದರೆ ಮಗುವಿಗೆ ಮೊಲೆ ಉಣಿಸುವಾಗ ಈ ಮಗು ಬೆಳೆದು ಶ್ರೇಷ್ಠ ವ್ಯಕ್ತಿಯಾದರೆ ತನಗೂ ಕೀರ್ತಿ ಲಾಭಗಳಿವೆ ಎಂಬುದಾಗಿ ಬಯಸಬಹುದು. ಅದಕ್ಕೋಸ್ಕರ ನಿರ್ವ್ಯಾಜ ಕೃಪೆಯಿಂದ ಪ್ರವೃತ್ತಿ ಎಸಗುವ ಆಕಳುಗಳ ಉದಾಹರಣೆಯನ್ನು ಭಗವಂತನ ಕೃಪಾಪೂರ್ಣ ದೃಷ್ಟಿಗೆ ಚಂದ್ರಿಕಾಕಾರರು ನೀಡಿದ್ದಾರೆ.

"ಯಥಾ ಸತಃ ಪುರುಷಾತ್ ಕೇಶಲೋಮಾನಿ" ಕೂದಲು ರೋಮಗಳ ಸೃಷ್ಟಿ ಮಾನವನಿಗೆ ಸುಲಭಸಾಧ್ಯ. ಭಗವಂತನಿಗೂ ಜಗತ್ ಸೃಷ್ಟಿ ಅನಾಯಾಸ ಸಾಧ್ಯ. ಪ್ರಯಾಸ ಪರಿಶ್ರಮಪೂರ್ವಕವಾಗಿ ಮಾಡುವ ಕ್ರಿಯೆಗೆ ಪ್ರಯೋಜನ ಅಭಿಲಾಷೆ ಇರಬಹುದು. 'ಇಚ್ಛಾಮಾತ್ರಂ ಪ್ರಭೋಃ ಸೃಷ್ಟಿಃ' ಎನ್ನುತ್ತದೆ ಉಪನಿಷತ್. "ಅತಿಪ್ರಯಾಸ ಸಾಧ್ಯೇಷು ಫಲಮಾಕಾಂಕ್ಷತೆ ಜನಃ । ನತ್ವನಾಯಾಸ ಸಂಸಾಧ್ಯೇಸ್ವಾಂಗುಲ್ಯಗ್ರಾದಿ ಚಾಲನೆ" (ಚಂದ್ರಿಕಾ). ಬೆರಳಿನ ತುದಿ ಅಲ್ಲಾಡಿಸುವಾಗ ಪ್ರಯೋಜನ ಪ್ರಜ್ಞೆ ಮೂಡುತ್ತದೆಯೆ.

1) ಕಣ್ಣಿಗೆ ಕಾಣದ ದೇವರ ಅಸ್ತಿತ್ವದ ಭಾರವನ್ನು ವೃಥಾ ಏಕೆ ಹೊರಬೇನ್ನುವ ಪ್ರಶ್ನೆಗೆ ಚಂದ್ರಿಕೆಯ ಉತ್ತರ,

''ಗೌರವಂ ತನ್ನಭಾರಾಯ ಯತ್ಪ್ರಮಾಣಸ್ಯ ಸಮ್ಮತಂ
ನಹಿ ಭಾರಾಯ ಭವತಿ ಕಾಂಕ್ಷಿತಂ ಕಾಂಚನಾದಿಕಂ" (ಚಂದ್ರಿಕಾ)

ನಾವು ಅಭಿಲಷಿತವಾದ ಬಂಗಾರದ ಆಭರಣಗಳ ಭಾರ ಲೆಕ್ಕಿಸಲಾರೆವು. ಕಡೆಯುವ ಕಲ್ಲನ್ನು ಬಂಗಾರದ ಕವಚದಿಂದ ಅಲಂಕರಿಸಿದರೂ ನಾವು ಧರಿಸಲು ಸದಾ ಸಿದ್ಧರಿದ್ದೇವೆ. ಅದರಂತೆ ಶಾಸ್ತ್ರ ಸಮ್ಮತನಾದ ಪರಮಾತ್ಮನೂ ಭಾರದ ಹೊರೆ ಆಗಲಾರ.

2) ನದಿಗಳು ಸಮುದ್ರವನ್ನು ಸೇರಿ ಸಮುದ್ರವೇ ಆಗುವಂತೆ, ಬ್ರಹ್ಮನನ್ನು ಸೇರಿದ ಜೀವರೂ ಬ್ರಹ್ಮರೇ ಆಗುತ್ತಾರೆ. ಇದೇ ಮುಕ್ತಿ ಎನ್ನುತ್ತಾರೆ ಜೀವಬ್ರಹ್ಮೈಕ್ಯವಾದಿಗಳು.

ಈ ಜೀವ ಬ್ರಹ್ಮೈಕ್ಯವನ್ನು ವಿಮರ್ಶಿಸುತ್ತಾ ಸೂತ್ರಕಾರರು "ಸ್ಯಾತ್ ಲೋಕವತ್" ಎಂಬುದಾಗಿ ನದೀ ನೀರು ಸಮುದ್ರ ನೀರೂ ಒಂದೇ ಆಗುತ್ತದೆ ಎನ್ನುವ ಪ್ರಕ್ರಿಯೆ ಲೋಕವಿರುದ್ಧವೆಂದಿದ್ದಾರೆ. ಪೂರ್ವಾಚಾರ್ಯರುಗಳ ಅಭಿಪ್ರಾಯವನ್ನು ಶ್ರೀವ್ಯಾಸರಾಜರು ತನ್ನದೇ ಆದ ಶೈಲಿಯಿಂದ ಪುಷ್ಟೀಕರಿಸಿದ್ದಾರೆ–

ನೀರಿಗೆ ನೀರು ಸೇರಿಸಿದರೆ ಎರಡೂ ನೀರೂ ಒಂದೇ ಆಗುವುದಾದರೆ ಹಾಲಿನ

ಒಂದು ಬಿಂದುವಿಗೆ ಬಿಂದಿಗೆ ತುಂಬಾ ನೀರು ತುಂಬಿಸಿದಾಗ ಅದನ್ನು ಹಾಲೆಂದೇ ಪರಿಗಣಿಸಬೇಕಾದೀತು. ಹಾಲು ನೀರುಗಳ ಮಿಶ್ರಣ ಹಾಲೇ ಆಗುವುದಾದರೆ "ಹಂಸ ಕ್ಷೀರ ನ್ಯಾಯ" (ನೀರನ್ನು ಬಿಟ್ಟು ಹಾಲು ಮಾತ್ರ ಸ್ವೀಕಾರ ಹಂಸದಿಂದ ಆಗುತ್ತದೆ) ಕ್ಕೆಲ್ಲಿ ಅವಕಾಶ ? ಸಮುದ್ರಕ್ಕೆ ಸೇರಿದ ನದೀ ನೀರು ಸಮುದ್ರದ ನೀರೇ ಆಗುವುದಾದರೆ, ಶುದ್ಧವಾದ ಹಾಲಿಗೆ ಬಿಂದು ಮಾತ್ರ ಮದ್ಯ ಸೇರಿಸಿದರೆ ಆ ಮಿಶ್ರಣವೂ ಶುದ್ಧ ಹಾಲೆಂದೇ ಒಪ್ಪಬೇಕಾಗುವುದು. 'ಕ್ಷೀರೇ ಸಿಕ್ತಾ ಸುರಾ ಚ ಕ್ಷೀರಂ ಸ್ಯಾತ್' (ಚಂದ್ರಿಕಾ) ಅದನ್ನೇಕೆ ಅಪೇಯವೆನ್ನುತ್ತಾರೆ ?

"ದ್ರುತ ಸ್ವರ್ಣ ತಾಮ್ರಯೋಃ ಮೇಲನೇನ ಅಭೇದೆ ತತ್ಕಾರ್ಯೇ ಪಣಾದೌ ಕೇವಲ ಸ್ವರ್ಣಾದಿ ಕಾರ್ಯ ಪಣಾತ್ ಮೌಲ್ಯಾದಿಬೇಧಶ್ಚ ನ ಸ್ಯಾತ್" ಬಂಗಾರವನ್ನು ಬೆಂಕಿಯಲ್ಲಿಟ್ಟು ದ್ರವೀಕರಿಸಬೇಕು. ತಾಮ್ರವನ್ನು ಕೆಂಡದಲ್ಲಿ ಕಾಯಿಸಿ ದ್ರವೀಕರಿಸಬೇಕು. ಬಂಗಾರದ ದ್ರವಕ್ಕೆ ತಾಮ್ರದ ದ್ರವವನ್ನು ಸೇರಿಸಬೇಕು. ಆಗ ಆ ದ್ರವ ಶುದ್ಧ ಬಂಗಾರವೇ ಎಂದು ಸಮುದ್ರ ನದಿಗಳ ನೀರಿಗೆ ಐಕ್ಯವನ್ನು ಅಂಗೀಕಾರ ಮಾಡತಕ್ಕವನು ಒಪ್ಪದೇ ನಿರ್ವಾಹವಿಲ್ಲ. ಹಾಗಾದರೆ ಮಿಶ್ರ ದ್ರವಗಳಿಂದ ಸಿದ್ಧಪಡಿಸಿದ ವಸ್ತುವಿಗೂ, ಶುದ್ಧ ಬಂಗಾರದ ದ್ರವದಿಂದ ಸಿದ್ಧಪಡಿಸಿದ ವಸ್ತುವಿಗೂ ಮೌಲ್ಯದಲ್ಲಿ ಏರು ಪೇರುಗಳೇಕೆ ? ಆದ್ದರಿಂದ ನದೀ ನೀರು ಸಮುದ್ರ ನೀರು ಒಂದಾಗುತ್ತದೆ ಎನ್ನುವುದು ವಿವೇಕಿಗಳಾರು ಒಪ್ಪಲಾರರು. ಅದರಂತೆ ಜೀವರೂ ಬ್ರಹ್ಮನನ್ನು ಸೇರಿದಾಗ ಬ್ರಹ್ಮರು ಹೇಗೆ ಆಗಬಲ್ಲರು ?

4) "ಮೃದಬ್ರವೀತ್" ಎನ್ನುವ ಶ್ರುತಿ ಮಣ್ಣು ಮಾತನಾಡುತ್ತದೆ ಎನ್ನುತ್ತದೆ. ಮಣ್ಣು ಜಡ, ಜ್ಞಾನಶೂನ್ಯ, ಇಂದ್ರಿಯ ರಹಿತ, ಅದು ಹೇಗೆ ತಾನೇ ಮಾತನಾಡಬಲ್ಲುದು ಎನ್ನುವ ಯುಕ್ತಿಗೆ ಅನುಗುಣವಾಗಿ ಸೂತ್ರಕಾರರು ಮೇಲೆ ಹೇಳಿದ ಶ್ರುತಿಗೆ ಅರ್ಥಾಂತರ ಮಾಡುತ್ತಿದ್ದಾರೆ. ಮಣ್ಣು ಅಂದರೆ ಮಣ್ಣಿನ ಅಭಿಮಾನಿ ದೇವತೆ. ಅಭಿಮಾನಿ ದೇವತೆ ಮಾತನಾಡಿತು ಎಂದು ವೇದವ್ಯಾಸರು ನಿರ್ಣಯಿಸಿದ್ದಾರೆ. ಇಲ್ಲಿ ಒಂದು ಸಮಸ್ಯೆ ಪ್ರಬಲವಾದ ಶ್ರುತಿ ತನ್ನನ್ನು ಅನುಸರಿಸುವ "ಅನುಮಾನ" (ಯುಕ್ತಿ) ವನ್ನೇ ಏಕೆ ಬಾಧಿಸಬಾರದು ? ಎಂದು. ಚಂದ್ರಿಕಾಕಾರರ ಉತ್ತರವಿದು. "ಮಹಾರಾಜ ಕುಮಾರೋಽಪಿ ಸ್ವಾಚ್ಛಂದ್ಯಾವಿರೋಧಿನಃ । ಬಾಧತೇ ನೈವ ಲೋಕೋಽಪಿ ದುರ್ಬಲಾನ್ ಭಿಕ್ಷುಕಾದಿಕಾನ್ ॥" ಪ್ರಬಲರು "ಈತ ದುರ್ಬಲ" ಎನ್ನುವ ಕಾರಣದಿಂದಲೇ ಆತನನ್ನು ನಿಂದಿಸುವುದಿಲ್ಲ. ಪ್ರಬಲರ ಸ್ವಚ್ಛಂದ ಪ್ರವೃತ್ತಿಗೆ ಅಡ್ಡ ಕಾಲಿಕ್ಕುವ ದುರ್ಬಲ ಶತ್ರುಗಳು ಮಾತ್ರ ಪ್ರಬಲರ ಬಲಾತ್ಕಾರಕ್ಕೆ ಬಲಿಯಾಗುತ್ತಾರೆ. ಪ್ರಬಲರಾದ ರಾಜಕುವರರು ಏನು (ಮಂತ್ರಿಗಳ ಸಂಬಂಧಿಕರು) ಏನೂ ಮಾಡಲೂ ಸಮರ್ಥರು. ಆದರೂ ತಮ್ಮ ಸ್ವೈರ ಆಚರಣೆಗೆ ವಿರೋಧಿಗಳಾಗದ ಭಿಕ್ಷುಕರನ್ನು ಅವರು ಸದೆ ಬಡಿಯುತ್ತಾರೆಯೇ ? ಅದರಂತೆ ತನ್ನ ಅಪ್ರಮಾಣ್ಯಕ್ಕೆ ವಿರೋಧಿಯಾಗದ ಈ ಯುಕ್ತಿಗೆ ಶ್ರುತಿ ಪ್ರಬಲ

ವಾಗಿದ್ದರೂ ಬಾಧಕವಾಗಲಾರದು.

5) "ಲೀಲಯಾ ದಂಡಮಾಲಂಬ್ಯ ಗಚ್ಛನ್ ಕಿಂ ಪಂಗುತಾಂ ವ್ರಜೇತ್" ॥ ಸರ್ವಶಕ್ತನಾಗಿದ್ದರೂ ಪರಮಾತ್ಮ ಜಗತ್ ಸೃಷ್ಟಿಯಲ್ಲಿ ತನ್ನ ಅಧೀನವಾದ ಇತರ ವಸ್ತುಗಳನ್ನು ಅಪೇಕ್ಷಿಸುತ್ತಾನೆ. ಇದರಿಂದ ಆತನ ಸ್ವಾತಂತ್ರ್ಯಕ್ಕೆ ಧಕ್ಕೆ ಬರಲಾರದು. ಕ್ರೀಡೆಗಾಗಿ ಆತ ಇತರ ವಸ್ತುಗಳನ್ನು ಉಪಯೋಗಿಸುತ್ತಾನಷ್ಟೇ. ಅದೊಂದು ವೈಭವ, ಮಹಾರಾಜರು ನಗರ ದರ್ಶನಕ್ಕೆ ತೆರಳುವಾಗ ಕೈಯಲ್ಲಿ ಕೋಲು ಹಿಡಿದೇ ನಡೆಯುತ್ತಾರೆ. ಅವರನ್ನು ಕುಂಟರೆನ್ನಬೇಕೆ ? ರಾಜನಿಗೆ ದಂಡದ ಅವಲಂಬನೆ ವೈಭವ, ಲೀಲೆಯಷ್ಟೇ.

ಇದೇ ರೀತಿ ಪ್ರಬಲ ಪ್ರಶ್ನೆಗೆ ಅತಿಪ್ರಬಲ ಪರಿಹಾರವನ್ನು ನೀಡುವ ವಿಶಿಷ್ಟ ಕ್ರಮವನ್ನು ಚಂದ್ರಿಕೆಯಲ್ಲಿ ಅನೇಕ ಕಡೆ ಕಾಣಬಹುದು. ಈ ಬೆಳದಿಂಗಳ ಬೆಳಕಲ್ಲಿ ಸಂಚರಿಸುವ ಸಾಧಕರಿಗೆ ಅಧಃಪಾತದ ಭಯವಿಲ್ಲ. ಅಲೌಕಿಕ ಪ್ರಮೇಯಗಳನ್ನು ಲೋಕಸಿದ್ಧ ಉದಾಹರಣೆಯೊಂದಿಗೆ ಉತ್ತರಿಸುವ ಈ ಕ್ರಮವನ್ನು ಎಲ್ಲರೂ ಮೆಚ್ಚಲೇ ಬೇಕು.

OOO

---

## ಮೂಳೂರಿನಲ್ಲಿ ವ್ಯಾಸತೀರ್ಥರ 'ತಾಂಡವ'

ಅನಂತಕಲ್ಯಾಣ ಗುಣೈಕರಾಶಿಂ । ಅಶೇಷದೋಷೋಜ್ಝಿತಮಪ್ರಮೇಯಮ್ ॥

ಇದು ತರ್ಕತಾಂಡವದ ಮಂಗಳ ಶ್ಲೋಕ. ಇಲ್ಲಿ ಅಪ್ರಮೇಯಂ ಎಂಬ ವಿಶೇಷಣವನ್ನು ಪರಮಾತ್ಮನಲ್ಲಿ ಪ್ರಯೋಗಿಸಿದ್ದರಿಂದ ಅವರು ತರ್ಕತಾಂಡವ ಗ್ರಂಥವನ್ನು ಮೂಳೂರಿನಲ್ಲಿ 'ಅಪ್ರಮೇಯ' ಸ್ವಾಮಿಯ ಸನ್ನಿಧಿಯಲ್ಲಿ ರಚಿಸಿದ್ದರೆಂದು ಪ್ರತೀತಿ. ಅದರಂತೆ 'ತಾತ್ಪರ್ಯ ಚಂದ್ರಿಕಾ' ಗ್ರಂಥದ ಆರಂಭದಲ್ಲಿ 'ಶೇಷಶಾಯಿನೇ' ಎಂದು ಶೇಷಶಾಯಿ ವಿಷ್ಣುವನ್ನು ನಮಸ್ಕರಿಸಿದ್ದರಿಂದ ಈ ಗ್ರಂಥವನ್ನು ಶ್ರೀರಂಗದ ತಮ್ಮ ಮಠದಲ್ಲಿ ರಚಿಸಿರಬೇಕು.

---

# 'ತಾತ್ಪರ್ಯ ಚಂದ್ರಿ'ಕೆಯ ಬೆಳಕಲ್ಲಿ ವಿಶಿಷ್ಟಾದ್ವೈತದ ನಿಜರೂಪ

ಸಗ್ರಿ ರಾಘವೇಂದ್ರ ಉಪಾಧ್ಯಾಯ, ವೇದಾಂತ ಪ್ರಾಧ್ಯಾಪಕ
ಸಂಸ್ಕೃತ ಕಾಲೇಜು, ಉಡುಪಿ.

ಶ್ರೀಮದಾಚಾರ್ಯರ ಬ್ರಹ್ಮಸೂತ್ರಭಾಷ್ಯವುಅದುವರೆಗೆ ಪ್ರಚಲಿತವಿದ್ದ ಬ್ರಹ್ಮಸೂತ್ರದ ಕುರಿತಾದ ಇಪ್ಪತ್ತೊಂದು ಕುಭಾಷ್ಯಗಳನ್ನು ನಿರಾಕರಿಸಬಲ್ಲದ್ದು. ಆದರೆ ಅದರಲ್ಲಿ ಇತರ ಭಾಷ್ಯಗಳ ನಿರಾಕರಣೆ ಸೂಚ್ಯವಾಗಿದೆಯೇ ಹೊರತು ವಾಚ್ಯವಾಗಿಲ್ಲ. ಕೆಲವೆಡೆ ವಾಚ್ಯವಾಗಿಯೇ ಇರುವುದಾದರೂ 'ನ ಚಾ ಶಬ್ದತ್ವ ಮಿತರ ಸಿದ್ಧಮ್' (ಶಾಸ್ತ್ರಯೋನಿತ್ವಾಧಿಕರಣದಲ್ಲಿ) 'ನ ಚಾನ್ಯತ್ ಕಲ್ಪ್ಯಮ್ ಅಪ್ರಾಮಾಣಿಕತ್ವಾತ್' (ಪ್ರಕೃತ್ಯಧಿಕರಣದಲ್ಲಿ) ಎಂಬ ರೀತಿಯಲ್ಲಿ ಸ್ಥೂಲವಾಗಿಯಷ್ಟೇ ಇರುವುದು. 'ಸ್ವಯಂ ಕೃತಾಽಪಿ ತದ್ವ್ಯಾಖ್ಯಾ ಕ್ರಿಯತೇ ಸ್ಪಷ್ಟತಾರ್ಥತಃ' ಎಂದು ಅಪವ್ಯಾಖ್ಯಾನವನ್ನು ನಿರಾಕರಿಸಿ ದೃಢೀಕರಿಸುವುದೇ ಮೊದಲಾದ ಸ್ಪಷ್ಟೀಕರಣಕ್ಕಾಗಿಯೇ ಹೊರಟ ಅನುವ್ಯಾಖ್ಯಾನದಲ್ಲಿ ಪರಮತ ನಿರಾಕರಣೆಯನ್ನು ವಿಸ್ತರಿಸಲಾಗಿದೆ. ಅಲ್ಲದೆ ಸೂತ್ರಭಾಷ್ಯದ ಟೀಕೆಯಾದ ತತ್ತ್ವಪ್ರಕಾಶಿಕಾದಲ್ಲೂ, ಅನುವ್ಯಾಖ್ಯಾನದ ಟೀಕೆಯಾದ ನ್ಯಾಯಸುಧಾದಲ್ಲೂ ಪರಮತ ಖಂಡನೆಯನ್ನು ಇನ್ನಷ್ಟು ವಿಸ್ತರಿಸಲಾಗಿದೆ.

ಆದರೂ ಇಲ್ಲೆಲ್ಲ ಪರಮತವಾಗಿ ಬಹುಶಃ ನಿರಾಕೃತವಾದದ್ದು ಅದ್ವೈತ ಮತ ಮಾತ್ರ. 'ಅಪಾದಾನತ್ವಮೇವಾಸ್ಯ ಯದ್ಯುಪಾದಾನತೇಷ್ಯತೇ । ಅಂಗೀಕೃತಂ ತತ್ ಪಿತೃವತ್........'—ಎಂದು ಪ್ರಕೃತ್ಯಧಿಕರಣದಲ್ಲಿ ಮಾಡಿರುವಂತೆ ವಿಶಿಷ್ಟಾದ್ವೈತದ ಪ್ರಮೇಯವನ್ನು ಪ್ರತ್ಯೇಕವಾಗಿ ಪರಾಮರ್ಶಿಸಿ ನಿರಾಕರಿಸಿದ್ದು ಬಹಳ ವಿರಳ.

ರಾಮಾನುಜೀಯ ಭಾಷ್ಯಾರ್ಥದ ವಿಮರ್ಶೆ ಭಾಷ್ಯದಲ್ಲಾಗಲೀ, ಟೀಕೆಯಲ್ಲಾಗಲೀ, ಅನುವ್ಯಾಖ್ಯಾನದಲ್ಲಾಗಲೀ, ಸುಧಾದಲ್ಲಾಗಲಿ ಸೂಚ್ಯವಾಗಿಯೂ

ನಮ್ಮ ಸ್ಥೂಲ ದೃಷ್ಟಿಗೆ ಕಾಣಿಸದಿದ್ದು, ಶ್ರೀವ್ಯಾಸತೀರ್ಥರ ತಾತ್ಪರ್ಯ ಚಂದ್ರಿಕಾದ ಬೆಳಕಲ್ಲಷ್ಟೇ ಕಾಣಬಹುದಾಗಿದೆ.

ರಾಮಾನುಜೀಯ ಭಾಷ್ಯದಲ್ಲಿ ಪ್ರಾಯಶಃ ಸೈದ್ಧಾಂತಿಕವಾಗಿ ವಿರೋಧವಿಲ್ಲದ ಪ್ರಯುಕ್ತ ಅದರ ನಿರಾಕರಣೆಗೆ ಶ್ರೀಮದಾಚಾರ್ಯರಾಗಲೀ, ಶ್ರೀಜಯತೀರ್ಥರಾಗಲೀ ಹೆಚ್ಚು ಗಮನ ಹರಿಸಿದಂತಿಲ್ಲ. ಆದರೆ ಸೈದ್ಧಾಂತಿಕವಾಗಿಯೂ ವಿರೋಧವಿದೆ ಎಂದರೆ ಅಂತಹ ಕಡೆ ರಾಮಾನುಜೀಯ ಭಾಷ್ಯಾರ್ಥವನ್ನು ಪ್ರತ್ಯೇಕವಾಗಿಯೇ ನಿರಾಕರಿಸಲಾಗಿದೆ. ಪ್ರಕೃತ್ಯಧಿಕರಣದಲ್ಲಿ ಬ್ರಹ್ಮನಿಗೆ ಜಗದುಪಾದಾನತ್ವವನ್ನು ಸಮರ್ಥಿಸಲಾಗಿದೆ ಎಂಬುದಾಗಿ ಅದ್ವೈತಿಗಳಂತೆ ವಿಶಿಷ್ಟಾದ್ವೈತಿಗಳೂ ವ್ಯಾಖ್ಯಾನಿಸಿರುವರು. ಅದ್ವೈತಿಗಳ ಪ್ರಕಾರ ಬ್ರಹ್ಮನು ಜಗದುಪಾದಾನನೆಂದರೆ ಜಗತ್ತಿನ ಆರೋಪಕ್ಕೆ ಅಧಿಷ್ಠಾನ ಎಂದಾದರೆ, ವಿಶಿಷ್ಟಾದ್ವೈತಿಗಳ ಪ್ರಕಾರ ಜಗದುಪಾದಾನವಾದ ಪ್ರಧಾನವೇ ಶರೀರವಾಗಿರ ವುದರಿಂದ ಬ್ರಹ್ಮನು ಜಗದುಪಾದಾನನೆಂದೆನಿಸಿರುವುದು. ಅಂತೂ ಈ ಇಬ್ಬರೂ ವಾದಿಗಳೂ ಪ್ರಕೃತ್ಯಧಿಕರಣ ಬ್ರಹ್ಮನಿಗೆ ಜಗದುಪಾದಾನತ್ವದ ಸಾಧನೆಗಾಗಿ ಹೊರಟಿರುವುದೆಂದು ಅಭಿಪ್ರಾಯಪಡುತ್ತಾರೆ. ಆದ್ದರಿಂದ ಇಲ್ಲಿ ಅದ್ವೈತವಾದಿಗಳಂತೆ ವಿಶಿಷ್ಟಾದ್ವೈತಿಗಳೂ ನಿರಾಕರಣಾರ್ಹರೇ. ಆದ್ದರಿಂದಲೇ ಭಾಷ್ಯ, ತತ್ತ್ವ ಪ್ರಕಾಶಿಕಾ, ಅನುವ್ಯಾಖ್ಯಾನ ಹಾಗೂ ಸುಧಾಗಳಲ್ಲಿ ಅದ್ವೈತಿಗಳ ಜಗದುಪಾದಾನತ್ವ ವಾದವನ್ನು ನಿರಾಕರಿಸಿರುವಂತೆ, ಅನುವ್ಯಾಖ್ಯಾನ ಮತ್ತು ನ್ಯಾಯಸುಧಾಗಳಲ್ಲಿ ವಿಶಿಷ್ಟಾದ್ವೈತಿಗಳ ಜಗದುಪಾದಾನತ್ವ ವಾದವನ್ನು ನಿರಾಕರಿಸಲಾಗಿದೆ.

ಶ್ರೀಮನ್ನ್ಯಾಯ ಸುಧಾದಲ್ಲಿ ನಿಷ್ಪ್ರಯೋಜಕತ್ವ ಪ್ರಸಂಗದಿಂದ ವಿಶಿಷ್ಟಾದ್ವೈತದ ಭಾಷ್ಯವನ್ನು ನಿರಾಕರಿಸಿದ್ದರೆ, ತಾತ್ಪರ್ಯ ಚಂದ್ರಿಕಾದಲ್ಲಿ ರಾಮಾನುಜೀಯ ಭಾಷ್ಯಾರ್ಥದ ಬಗ್ಗೆ ಬರಬಹುದಾದ ಇನ್ನೂ ಅನೇಕ ಅಸ್ವಾರಸ್ಯಗಳನ್ನು ಕ್ರೋಡೀಕರಿಸಿ ಸ್ಪಷ್ಟೀಕರಿಸಲಾಗಿದೆ.

'ಯತ್ತೂಕ್ತಮುಭಾಭ್ಯಾಂ' ಎಂಬುದಾಗಿ ಅದ್ವೈತಿ ಹಾಗೂ ವಿಶಿಷ್ಟಾದ್ವೈತಿಗಳಿಬ್ಬರ ಭಾಷ್ಯಗಳನ್ನು ಪರಾಮರ್ಶಿಸಿದ 'ತಾತ್ಪರ್ಯ ಚಂದ್ರಿಕಾ'ದಲ್ಲಿ ಬ್ರಹ್ಮನಿಗೆ ಜಗದುಪಾದಾನತ್ವವನ್ನು ಹೇಳುವ ಆ ಎರಡು ಭಾಷ್ಯಗಳ ಅರ್ಥಗಳಿಗೂ ಒಂದೇ ರೀತಿಯ ದೋಷಗಳು ಸಂಭವಿಸುವುದರಿಂದ ಅವನ್ನೆಲ್ಲ ಒಟ್ಟಾಗಿಯೇ ಹೀಗೆ ಉಲ್ಲೇಖಿಸಲಾಗಿದೆ—

'ಪ್ರಕೃತಿಶ್ಚ ಪ್ರತಿಜ್ಞಾ ದೃಷ್ಟಾಂತಾನುಪರೋಧಾತ್'— ಮೊದಲಾದ ಸೂತ್ರಗಳಲ್ಲಿ ಬ್ರಹ್ಮನಿಗೆ ಜಗದುಪಾದಾನತ್ವವನ್ನು ಸಮರ್ಥಿಸಲಾಗಿದೆ ಎನ್ನುವ ವಿಶಿಷ್ಟಾದ್ವೈತಿಗಳ ಪ್ರಕಾರ ಆ ಸೂತ್ರಗಳಲ್ಲಿ ಯಾವುದೇ ಶಬ್ದದ ಸಮನ್ವಯ ನಡೆಸದ

ಪ್ರಯುಕ್ತ ಸಮನ್ವಯಾಧ್ಯಾಯದಲ್ಲಿ ಅವುಗಳ ಪ್ರವೇಶವು ಅಸಂಗತವೆನಿಸೀತು—

ಹಾಗೆಯೇ ಪ್ರಥಮಾಧ್ಯಾಯದ ಚತುರ್ಥಪಾದವು ಪ್ರಧಾನಕ್ಕೆ ಅಶಾಬ್ದತ್ವದ ಸಮರ್ಥನೆಗಾಗಿ ಹೊರಟಿರುವುವೆಂದು ಹೇಳುವ ಅವರ ಪ್ರಕಾರ ಬ್ರಹ್ಮನಿಗೆ ಜಗದುಪಾದಾನತ್ವವನ್ನಷ್ಟೇ ಸಮರ್ಥಿಸ ಹೊರಟ ಪ್ರಕೃತ್ಯಧಿಕರಣವು ಪ್ರಥಮಾಧ್ಯಾಯದ ಚತುರ್ಥಪಾದದಲ್ಲಿ ಸೇರಿಕೊಳ್ಳಲು ಅಯೋಗ್ಯವೆನಿಸೀತು !

ಈ ಪಾದದ ಆರಂಭದ ಮೂರು ಅಧಿಕರಣಗಳಲ್ಲಿ ವಿಶಿಷ್ಟಾದ್ವೈತಿಗಳ ಪ್ರಕಾರ ಸಾಂಖ್ಯಾಭಿಮತವಾದ ಪ್ರಧಾನವು ನಿರಾಕೃತವಾಗಿದ್ದು, ಹಾಗಾದರೆ ಜಗತ್ತು ನಿರುಪಾದಾನವೆನಿಸಿತೆಂಬ ಸಂದೇಹವು ಕೂಡಲೇ ಉದಯಿಸುವುದರಿಂದ ಅದರ ಪರಿಹಾರಕ್ಕಾಗಿ ಆ ಮೂರು ಅಧಿಕರಣಗಳ ಬಳಿಕವೇ ಬ್ರಹ್ಮನಿಗೆ ಜಗದುಪಾದಾನತ್ವವನ್ನು ಸಾಧಿಸುವ ಪ್ರಕೃತ್ಯಧಿಕರಣವು ಪಠಿತವಾಗಬೇಕಿತ್ತು. ಅದು ಬಿಟ್ಟು ಸಮನ್ವಯಪರಗಳಾದ ಅನೇಕ ಅಧಿಕರಣಗಳನ್ನು ಪಠಿಸಿ ಅನಂತರ ಪ್ರಕೃತ್ಯಧಿಕರಣದ ಪಾಠವು ಸಮಂಜಸವೆನಿಸಲಾರದು.

ಸಮನ್ವಯಾಧ್ಯಾಯದಲ್ಲಿ ಪಠಿತವಾಗಿದ್ದರೂ 'ಪ್ರಕೃತಿಶ್ಚ ಪ್ರತಿಜ್ಞಾದೃಷ್ಟಾಂತಾನುಪರೋಧಾತ್' ಎಂಬ ಸೂತ್ರದಲ್ಲಿ ಪ್ರಕೃತಿಶಬ್ದದ ಸಮನ್ವಯವನ್ನು ಹೇಳುತ್ತಿಲ್ಲ ಬದಲಾಗಿ ಬ್ರಹ್ಮನಿಗೆ ಜಗದುಪಾದಾನತ್ವವನ್ನು ಸಿದ್ಧಾಂತಿಸಲಾಗಿದೆ ಎಂದು ವ್ಯಾಖ್ಯಾನಿಸಿರುವ ವಿಶಿಷ್ಟಾದ್ವೈತಿಗಳ ಪ್ರಕಾರ ಸಮಾನ ನ್ಯಾಯದಿಂದ 'ಆಕಾಶಸ್ತಲ್ಲಿಂಗಾತ್' ಎಂಬ ಸೂತ್ರದಲ್ಲೂ ಆಕಾಶ ಶಬ್ದದ ಸಮನ್ವಯವಿರದೆ ಬ್ರಹ್ಮನಿಗೆ ಆಕಾಶತ್ವವನ್ನೇ ಸಮರ್ಥಿಸಲಾಗಿದೆ ಎಂದೇ ಆದೀತು !

ಪರಪಕ್ಷದ ಪ್ರಕಾರ 'ಪ್ರಕೃತಿಶ್ಚ ಪ್ರತಿಜ್ಞಾದೃಷ್ಟಾಂತಾನುಪರೋಧಾತ್' ಎಂಬ ಸೂತ್ರದಲ್ಲಿ ಬ್ರಹ್ಮನಿಗೆ ಪ್ರಕೃತಿ ಶಬ್ದದಿಂದ ಜಗದುಪಾದಾನತ್ವವನ್ನು ಹೇಳಿದ್ದರೆ, ಚಕಾರದಿಂದ ಜಗನ್ನಿಮಿತ್ತತ್ವವನ್ನು ಹೇಳಲಾಗಿದೆ. ಆದರೆ ಏಕವಿಜ್ಞಾನದಿಂದ ಸರ್ವವಿಜ್ಞಾನದ ಪ್ರತಿಜ್ಞೆ, ಏಕಮೃತ್ಪಿಂಡದ ಜ್ಞಾನದಿಂದ ಮೃದ್ವಿಕಾರಗಳ ಜ್ಞಾನ ಉಂಟಾಗುವುದೆಂಬ ದೃಷ್ಟಾಂತ ಜಗದುಪಾದಾನತ್ವವನ್ನು ಸಮರ್ಥಿಸುವ ಹೇತುವಾದೀತೇ ಹೊರತು ಜಗನ್ನಿಮಿತ್ತತ್ವವನ್ನು ಸಮರ್ಥಿಸಲು ಹೇತುಗಳಾಗಲಾರವು.

ಕರ್ತೃಕಾರಕದಂತೆ ಕಾಲಾದಿರೂಪಗಳಾದ ಅಧಿಕರಣಾದಿಕಾರಕಗಳೂ ಬ್ರಹ್ಮನಿಗಿಂತ ಅಭಿನ್ನಗಳೆನಿಸಿದರೆನೇ ಬ್ರಹ್ಮಜ್ಞಾನದಿಂದ ಅವೆಲ್ಲವುಗಳ ಜ್ಞಾನವೂ ಬರಬಹುದಾದುದರಿಂದ 'ಸದೇವ ಸೋಮ್ಯ ಇದಮಗ್ರ ಆಸೀತ್' ಎಂಬುದಾಗಿ ಕಾರ್ಯೋತ್ಪತ್ತಿಗಿಂತಲೂ ಮೊದಲು ಬ್ರಹ್ಮನಂತೆ ಶ್ರುತವಾದ ಕಾಲವೂ ಬ್ರಹ್ಮಾಭಿನ್ನವೆನಿಸಬೇಕಾದೀತು.

ಏಕವಿಜ್ಞಾನದಿಂದ ಸರ್ವವಿಜ್ಞಾನದ ಪ್ರತಿಜ್ಞೆಯ ಅನುಸಾರವಾಗಿ ಬ್ರಹ್ಮ

ಸರ್ವದ ಉಪಾದಾನವಾಗಿದ್ದು ಸರ್ವದಿಂದ ಅಭಿನ್ನನೆನಿಸುವುದಾದರೆ, ಅಂತಹ ಬ್ರಹ್ಮ ಸರ್ವಕ್ಕೆ ನಿಮಿತ್ತನೆನಿಸಲಾರ. ನಿಮಿತ್ತತ್ವವು ವ್ಯಾಪ್ಯವಾಗಿದ್ದು ಭೇದವು ವ್ಯಾಪಕವಾಗಿರುವುದರಿಂದ ವ್ಯಾಪಕವಾದ ಭೇದವಿಲ್ಲದಿದ್ದಲ್ಲಿ ವ್ಯಾಪ್ಯಕವಾದ ನಿಮಿತ್ತತ್ವವಾದರೂ ಹೇಗೆ ತಾನೇ ಇದ್ದೀತು ?

ತಂತುವಿಗೆ ಊರ್ಣನಾಭಿ ನಿಮಿತ್ತವೂ ಹೌದು ಉಪಾದಾನವೂ ಹೌದು ಎನ್ನುವ ವಿಶಿಷ್ಟಾದ್ವೈತಿಗಳು ಉಪಾದಾನವಾದ ಊರ್ಣನಾಭಿಗೂ ಆದರ ಕಾರ್ಯವಾದ ತಂತುವಿಗೂ ಭೇಧವನ್ನು ಒಪ್ಪಿರುವರು. ಹಾಗೆಯೇ ಊರ್ಣನಾಭಿಯ ಜ್ಞಾನದಿಂದ ತಂತುವಿನ ಜ್ಞಾನವೇನೂ ಬರಲಾರದೆಂದೇ ಅವರ ಆಶಯ. ಹೀಗಿರುವಾಗ ಬ್ರಹ್ಮ-ಜಗತ್ತುಗಳ ನಡುವೆ ಉಪಾದಾನ-ಉಪಾದೇಯಭಾವ ಸಂಬಂಧ ಇದ್ದಾಕ್ಷಣ ಬ್ರಹ್ಮ ಜಗತ್ತುಗಳ ನಡುವೆ ಅಭೇವಾದಿಗಳನ್ನು ಒಪ್ಪುವುದಾದರೂ ಹೇಗೆ ?

ನಿಜ; ಲೋಕದಲ್ಲಿ ಹೀಗೆಯೇ ಇದೆ. ಲೋಕದೃಷ್ಟಿಯನ್ನು ಮೀರಿ ಶ್ರುತಿಯ ಬಲದಿಂದಾಗಿ ಬ್ರಹ್ಮ ಜಗತ್ತಿಗೆ ನಿಮಿತ್ತನಾದರೂ, ಅವನ ಜ್ಞಾನದಿಂದ ಸರ್ವಜ್ಞಾನವು ಕೂಡಬೇಕೆನ್ನುವುದಾದರೆ, ಬ್ರಹ್ಮನನ್ನು ಜಗತ್ತಿಗೆ ಉಪಾದಾನನೆಂದು ಒಪ್ಪದೆಯೇ. ಹೇಗಿದ್ದರೂ ಶ್ರುತಿಯ ಬಲದಿಂದಾಗಿ ಬ್ರಹ್ಮಜ್ಞಾನದಿಂದ ಸರ್ವಜ್ಞಾನವನ್ನು ಕೂಡಿಸಬಹುದು ತಾನೇ ?

ಶ್ರೀವ್ಯಾಸರಾಜರು ತಾತ್ಪರ್ಯ ಚಂದ್ರಿಕಾದಲ್ಲಿ ರಾಮಾನುಜೀಯ ಭಾಷ್ಯಾರ್ಥವನ್ನು ಹಂತ ಹಂತವಾಗಿ ವಿಶ್ಲೇಷಿಸಿ ಹೇಗೆ ನಿರಾಕರಿಸಿರುವರೆಂಬುದಕ್ಕೆ ಮೇಲಿನದು ಉತ್ತಮ ನಿದರ್ಶನವೆನಿಸಬಲ್ಲುದು.

ಅಂತೂ ತಾತ್ಪರ್ಯ ಚಂದ್ರಿಕಾವನ್ನು ಅಧ್ಯಯನ ಮಾಡಿದಲ್ಲಿ ಬ್ರಹ್ಮಸೂತ್ರಗಳಿಗೆ ಅದ್ವೈತಿಗಳ ಅರ್ಥವನ್ನಾಗಲೀ, ವಿಶಿಷ್ಟಾದ್ವೈತಿಗಳ ಅರ್ಥವನ್ನಾಗಲೀ ಸ್ವೀಕರಿಸದೆ ದ್ವೈತಿಗಳ ಅರ್ಥವನ್ನೇ ಯಾಕೆ ಸ್ವೀಕರಿಸಬೇಕೆಂಬುದು ಸ್ಪಷ್ಟವಾಗಿ ನಿಶ್ಚಿತವಾಗಿ ತಿಳಿಯುವುದು.

---

**ಚಂದ್ರಿಕಾ**

ಶ್ರೀವ್ಯಾಸಯೋಗಿಗಳ ಮುಖಚಂದ್ರದಿಂದ ತಾತ್ಪರ್ಯ ಚಂದ್ರಿಕೆಯೆಂಬ ಬೆಳದಿಂಗಳು ನಿಃಸೃತವಾಗಿ ಪಸರಿಸಿ ಲೋಕವನ್ನು ಆವರಿಸಿದ್ದ ಮಿಥ್ಯಾಜ್ಞಾನವೆಂಬ ಅಂಧಕಾರವು ಪರಿಹೃತವಾಯಿತು. ಮಧ್ವಮತವೆಂಬ ದುಗ್ಧಾಬ್ಧಿಯು ಹರುಷದಿಂದ ಉಕ್ಕೇರಿ ಹರಿಯಿತು. ಸಕಲ ಲೋಕವೂ ನಿರ್ಮಲತೆಯನ್ನು ಪಡೆಯಿತು.

ವ್ಯಾಸಯೋಗಿ ಚರಿತೆ

# ನ್ಯಾಯಾಮೃತದಲ್ಲಿ ಶ್ರುತ್ಯರ್ಥವಿಶ್ಲೇಷಣೆ

—ಜಿ. ಗುರುವೆಂಕಟಾಚಾರ್ಯ

ಶ್ರೀವ್ಯಾಸರಾಜರು ನ್ಯಾಯಾಮೃತದಲ್ಲಿ ಅದ್ವೈತಮತದ ಎಲ್ಲ ಪ್ರಮೇಯಗಳನ್ನೂ ಬೇರೆ ಬೇರೆ ಪ್ರಕರಣಗಳಲ್ಲಿ ಸೂಕ್ಷ್ಮವಾಗಿ ಹೃದಯಂಗಮವಾಗಿ ವಿಮರ್ಶಿಸಿದ್ದಾರೆ. ಶ್ರುತಿವಾಕ್ಯಗಳಿಗೂ ಸಹ ಅದ್ವೈತ ಮತದಲ್ಲಿ ವರ್ಣಿತವಾದ ಅರ್ಥವನ್ನು ಅನುವಾದ ಮಾಡಿ ಅದರ ಅಯುಕ್ತತೆಯನ್ನು ಯುಕ್ತಿ ಯುಕ್ತವಾಗಿ ಸಮರ್ಥಿಸಿದ್ದಾರೆ.

ಇಲ್ಲಿ, "ಸಲಿಲ ಏಕೋ ದ್ರಷ್ಟಾ ಅದ್ವೈತೋ ಭವತಿ", ಏಕಮೇವಾದ್ವಿತೀಯಂ ಬ್ರಹ್ಮ", "ನೇಹ ನಾನಾಸ್ತಿ ಕಿಂಚನ" "ಯತ್ರತ್ವಸ್ಯ ಸರ್ವಮಾತ್ಮೈವಾ ಭೂತ್", "ವಾಚಾರಂಭಣಂ ವಿಕಾರೋ" ಇತ್ಯಾದಿ ಅನೇಕ ಶ್ರುತ್ಯರ್ಥವನ್ನು ವಿಮರ್ಶಿಸುವುದಲ್ಲದೇ ಅವುಗಳಿಗೆ ದ್ವೈತಪರವಾದ ಅರ್ಥವನ್ನು ಆಧಾರಸಹಿತವಾಗಿ ನಿರೂಪಿಸಿದ್ದಾರೆ.

ಈ ಶ್ರುತಿಗಳಿಗೆ ಅದ್ವೈತಿಗಳು ಹೇಳಿದ ಅರ್ಥವನ್ನು ವಿಮರ್ಶಿಸುವಾಗ ಆ ಅರ್ಥಕ್ಕೆ ಆಯಾ ಶ್ರುತಿಗಳಲ್ಲಿರುವ ಪದಗಳಿಂದಲೇ ವಿರೋಧವನ್ನು ತೋರಿಸಿದ್ದಾರೆ. ಮತ್ತು ಆಯಾ ಶ್ರುತಿಗಳ ಪೂರ್ವಾಪರ ವಾಕ್ಯಗಳನ್ನು ವಿಮರ್ಶಿಸುವುದು ಮಾತ್ರವಲ್ಲದೇ ಮೀಮಾಂಸ, ವ್ಯಾಕರಣ, ಕೆಲವೆಡೆ ಅದ್ವೈತ ಗ್ರಂಥಗಳೇ ಮುಂತಾದ ಶಾಸ್ತ್ರಾಂತರ ಪ್ರಕ್ರಿಯೆಯನ್ನು ತೋರಿಸಿ ಅದ್ವೈತಿಗಳ ಅರ್ಥದಲ್ಲಿ ಅಸಾಂಗತ್ಯವನ್ನು ಪ್ರದರ್ಶಿಸುವುದು ಇವರ ವೈಶಿಷ್ಟ್ಯ.

ಪ್ರಕೃತ ಲೇಖನದಲ್ಲಿ ಸ್ಥಾಲೀಪುಲಾಕನ್ಯಾಯೇನ ಕೆಲವೇ ಉದಾಹರಣೆಗಳನ್ನು ನಿರೂಪಿಸಲಾಗಿದೆ.

ಛಾಂದೋಗ್ಯದ "ಏಕಮೇವಾದ್ವಿತೀಯಂ ಬ್ರಹ್ಮ" ಎಂಬ ವಾಕ್ಯಕ್ಕೆ ಅದ್ವೈತಿಗಳು ಏಕಮೇವ ಮತ್ತು ಅದ್ವಿತೀಯಂ ಎಂಬ ಪದಗಳನ್ನಾಧರಿಸಿ ಅದ್ವೈತಪರ ಅರ್ಥವನ್ನು ವರ್ಣಿಸಿದ್ದಾರೆ. ಆದರೆ ಇವರ ಪೂರ್ವಾಪರ ವಾಕ್ಯಗಳೆರಡೂ

ಸಹ ಸ್ಪಷ್ಟವಾಗಿ ದ್ವೈತ ಪರವಾಗಿರುವುದು ಕಂಡುಬರುತ್ತದೆ. 'ಸದೇವ ಸೌಮ್ಯ ಇದಮಗ್ರ ಆಸೀತ್' ಎಂಬ ಪೂರ್ವವಾಕ್ಯದಲ್ಲಿ 'ಅಗ್ರೇ' (ಸೃಷ್ಟಿ ಪೂರ್ವದಲ್ಲಿ) ಎಂಬ ಕಾಲಸೂಚಕ ಪದವಿದೆ. 'ತದ್ವ್ಯಕ್ತತ ನಾಮರೂಪೇ ವ್ಯಾಕರೋತ್' ಎಂಬ ಅನಂತ ರದ ವಾಕ್ಯದಲ್ಲಿ ನಾಮರೂಪಾತ್ಮಕ ಪ್ರಪಂಚವನ್ನು ಸೂಚಿಸುವ ಪದವಿದೆ. ಹೀಗೆ ಪೂರ್ವಾಪರ ವಾಕ್ಯಗಳೆರಡೂ ಸಹ ದ್ವೈತತತ್ತ್ವ ಪರವಾಗಿರಲು ಮಧ್ಯಸ್ಥವಾಕ್ಯಕ್ಕೆ ಮಾತ್ರ ಅದ್ವೈತಪರತ್ವವನ್ನು ಹೇಳಿದರೆ ಆದು ಪೂರ್ವಾಪರ ವಿರುದ್ಧವಾಗುವುದು.

ಆದ್ದರಿಂದ "ಸೃಷ್ಟಿಕಾಲದಲ್ಲಿ ಬ್ರಹ್ಮನೊಬ್ಬನೇ ಸ್ವತಂತ್ರನಾಗಿದ್ದ" ಎಂಬ ಅರ್ಥವನ್ನು ಹೇಳುವುದು ಸೂಕ್ತವಾಗುತ್ತದೆ. ಏಕ ಶಬ್ದವಿದೆ ಎಂಬ ಕಾರಣದಿಂದ ದ್ವಿತೀಯ ಪದಾರ್ಥವನ್ನೇ ನಿಷೇಧಿಸಬೇಕಾಗಿಲ್ಲ. ಏಕ ಶಬ್ದಕ್ಕೆ ಮುಖ್ಯಾರ್ಥಕತ್ವವು ಅಮರಕೋಶದಲ್ಲಿ ಹೇಳಲ್ಪಟ್ಟಿದೆ. ವ್ಯಾಕರಣ ಶಾಸ್ತ್ರದಲ್ಲಿಯೂ "ಏಕೋ ಗೋತ್ರೇ" ಎಂಬ ಸೂತ್ರದ ವಿವರಣೆಯ ಸಂದರ್ಭದಲ್ಲಿ ಏಕ ಶಬ್ದಕ್ಕೆ ಪ್ರಾಧಾನ್ಯ ಸಹಾಯಾನ ಪೇಕ್ಷತ್ವ, ಸಂಖ್ಯಾ, ಸಮಾನತೆ ಇತ್ಯಾದಿ ಅರ್ಥಗಳು ಹೇಳಲ್ಪಟ್ಟಿವೆ. ಪ್ರಕೃತ ಬ್ರಹ್ಮನಲ್ಲಿ ಈ ಎಲ್ಲ ಅರ್ಥಗಳೂ ಸಂಭವಿಸುತ್ತವೆ. ಜೀವಾದಿಗಳಿಗಿಂತ ಬ್ರಹ್ಮನಿಗೆ ಪ್ರಾಧಾನ್ಯವಿದೆ. ಸೃಷ್ಟಿಕಾಲದಲ್ಲಿ ಬ್ರಹ್ಮನಿಗೆ ಸಹಾಯದ ಅಪೇಕ್ಷೆ ಇರುವುದಿಲ್ಲ. ಬ್ರಹ್ಮನು ಸಗುಣನಾದ ಪ್ರಯುಕ್ತ ಏಕತ್ವ ಸಂಖ್ಯೆಯುಳ್ಳವನೂ ಆಗಿದ್ದಾನೆ. ನಾನಾ ರೂಪಗಳಲ್ಲಿ ಬ್ರಹ್ಮನು ನಿರ್ದೋಷತ್ವೇನ ಸಮಾನನು ಆಗಿರುವನು. ಮತ್ತು ಅದ್ವೈತಿಗಳೇ ಏಕ ಶಬ್ದಕ್ಕೆ ತಮ್ಮ ಗ್ರಂಥಗಳಲ್ಲಿ ಸ್ವಗತ ಭೇದನಿಷೇಧಕತ್ವವನ್ನು ಅಂಗೀಕರಿಸಿದ್ದಾರೆ. ಆದ್ದರಿಂದ ಇವರ ಮತದ ಪ್ರಕಾರವೇ ಏಕಶಬ್ದದಿಂದ ಬ್ರಹ್ಮನು ಸ್ವಗತ ಭೇದಶೂನ್ಯ ಎಂಬ ಅರ್ಥಸಿದ್ಧವಾಗುವಾಗ ಪ್ರಮಾಣ ವಿರುದ್ಧವಾದ ಅದ್ವೈತಪರ ಅರ್ಥವನ್ನು ಹೇಳುವುದು ಯುಕ್ತವಲ್ಲ.

ಇದೇ ಶ್ರುತಿಯಲ್ಲಿರುವ ಅದ್ವಿತೀಯಂ ಎಂಬ ಪದಕ್ಕೂ ಸಹ ಎರಡನೇ ಪದಾರ್ಥವೇ ಇಲ್ಲದಿರುವುದೆಂಬ ಅರ್ಥ ಸರಿಯಲ್ಲ. ಅದು ಬಹು ಪ್ರಮಾಣ ವಿರುದ್ಧ. ಆದ್ದರಿಂದ ದ್ವಿತೀಯ ಪದಾರ್ಥವಾದ ಜಗತ್ತಿಗಿಂತ ಭಿನ್ನ ಎಂದು ಅರ್ಥೈಸಬೇಕು. ಅಥವಾ ಅದ್ವಿತೀಯನೆಂದರೆ ಬ್ರಹ್ಮನು ಸಹಾಯಾಪೇಕ್ಷೆ ಇಲ್ಲದವನು ಎಂದರ್ಥ. ದ್ವಿತೀಯ ಪದಕ್ಕೆ ಸಹಾಯ ಎಂಬ ಅರ್ಥವು ವ್ಯಾಕರಣ ಮಹಾಭಾಷ್ಯದಲ್ಲಿ ನಿರೂಪಿತವಾಗಿದೆ. ಮಹಾಭಾರತದಲ್ಲಿಯೂ "ಅಸಿದ್ವಿತೀಯಃ ಅನುಸಸಾರ ಪಾಂಡವಃ" ಎಂದು ಸಹಾಯಾರ್ಥದಲ್ಲಿ ದ್ವಿತೀಯ ಶಬ್ದ ಪ್ರಯುಕ್ತವಾಗಿದೆ. [ಅಸಿ = ಖಡ್ಗ]

"ಯತ್ರತ್ವಸ್ಯ ಸರ್ವಮಾತ್ಮೈವಾಭೂತ್" ಎಂಬ ವಾಕ್ಯಕ್ಕೆ ಅದ್ವೈತಿಗಳು "ಮುಕ್ತಿಯಲ್ಲಿ ಎಲ್ಲ ಜೀವವೂ ಬ್ರಹ್ಮೈಕ್ಯವನ್ನು ಪಡೆದು ಚಿನ್ಮಾತ್ರ ವಶೇಷವಾಗುತ್ತದೆ ಎಂಬ ಅರ್ಥವನ್ನು ಹೇಳುತ್ತಾರೆ. ಆದರೆ ಈ ವಾಕ್ಯ ಸ್ವಸಿದ್ಧಾಂತರೀತ್ಯಾ ಮುಕ್ತಿ ಸ್ವರೂಪ ನಿರೂಪಣೆಗೆ ಪ್ರವೃತ್ತವಾಗಿಲ್ಲ. ಈ ವಾಕ್ಯದ ಪೂರ್ವಾಪರ ಸಂದ

ರ್ಥವನ್ನು ಗಮನಿಸಿದಾಗ ಅಭಿಪ್ರಾಯವು ಸ್ಪಷ್ಟವಾಗುತ್ತದೆ-ಶ್ರುತಿಯು ಮೊದಲು "ಸ ಯಥಾ ಸೈಂಧವ" ಇತ್ಯಾದಿ ವಾಕ್ಯದಿಂದ "ಪರಬ್ರಹ್ಮನಲ್ಲಿ ಜೀವನ ಸ್ಥಿತಿಯೇ ಮುಕ್ತಿ" ಎಂಬುದಾಗಿ ಸ್ವಸಿದ್ಧಾಂತರೀತ್ಯಾ ಮುಕ್ತಿ ಸ್ವರೂಪವನ್ನು ಹೇಳಿದೆ. ಅನಂತರ ವಲ್ಲಿ "ಅವಿನಾಶೀವಾ ಅರೇ..." ಇತ್ಯಾದಿ ವಾಕ್ಯದಿಂದ ಬೌದ್ಧ ಹಾಗೂ ವೈಶೇಷಿಕ ಮತದ ಮುಕ್ತಿ ಸ್ವರೂಪವನ್ನು ಖಂಡಿಸಿ ಪ್ರಕೃತದಲ್ಲಿ ಯತ್ರತ್ವಸ್ಯ ಎಂಬ ವಾಕ್ಯ ದಿಂದ ಚಿನ್ಮಾತ್ರಾ ವಶೇಷವೇ ಮುಕ್ತಿ ಎಂಬ ವಾದವನ್ನು ಖಂಡಿಸಲು ಪ್ರವೃತ್ತ ವಾಗಿದೆ. ಚಿನ್ಮಾತ್ರಾವಶೇಷವೇ ಮುಕ್ತಿಯೆಂದಾದಪಕ್ಷದಲ್ಲಿ ಜೀವಾತ್ಮನು ಯಾವ ಸುಖವನ್ನು ಪಡೆದಾನು ? ಎಂದು ಆಕ್ಷೇಪಿಸುವುದೇ ಈ ವಾಕ್ಯದ ಉದ್ದೇಶವೆಂದು ಪ್ರಕರಣ ಪರ್ಯಾಲೋಚನೆಯಿಂದ ತಿಳಿಯುವುದು. ಆದ್ದರಿಂದ ಈ ವಾಕ್ಯವೂ ಕೂಡ ಪ್ರಪಂಚ ಮಿಥ್ಯಾತ್ವ ಸಾಧಕವಾಗಲಾರದು.

ಹೀಗೆ ಬಹುಸೂಕ್ಷ್ಮವಾಗಿ ವೇದದ ಅಪವ್ಯಾಖ್ಯಾನವನ್ನು ಖಂಡಿಸಿ ನಿಜವಾದ ಅರ್ಥವನ್ನು ತಿಳಿಸಿ ವೈದಿಕ ಪಂಥವನ್ನು ಪುನರುಜ್ಜೀವನಗೊಳಿಸಿದ ಕೀರ್ತಿ ಶ್ರೀವ್ಯಾಸ ರಾಜರಿಗೆ ಸಲ್ಲುತ್ತದೆ. ಆದ್ದರಿಂದ ಪ್ರತಿಯೊಬ್ಬ ವಾಸ್ತವಿಕ ವೈದಿಕರೂ ಶ್ರೀವ್ಯಾಸ ರಾಜರಿಗೆ ಚಿರಋಣಿಗಳು.

---

## ವ್ಯಾಸತೀರ್ಥರ ಇನ್ನೊಂದು ಗ್ರಂಥ!

'ಪ್ರಪಂಚಸ್ತು ಸತ್ತರ್ಕವಿಲಾಸೇ ಅಸ್ಮತ್ಕೃತೇ ದ್ರಷ್ಟವ್ಯಃ' ಇದು ವ್ಯಾಸತೀರ್ಥರ ಮಾಯಾವಾದ ಖಂಡನ ಮಂದಾರ ಮಂಜರಿಯಲ್ಲಿ ಬರುವ ಒಂದು ವಾಕ್ಯ ಜೀವನ್ಮುಕ್ತಿಯ ವಿಚಾರ 'ಸತ್ತರ್ಕ ವಿಲಾಸ'ವೆಂಬ ನಮ್ಮ ಗ್ರಂಥದಲ್ಲಿ ನೋಡಿಕೊಳ್ಳಿ ಎಂದಿದ್ದಾರೆ. ಯಾವುದೀ ಸತ್ತರ್ಕ ವಿಲಾಸ ? ತರ್ಕತಾಂಡವವೇ ? ಅಲ್ಲ. ಏಕೆಂದರೆ ಅಲ್ಲಿ ಜೀವನ್ಮುಕ್ತಿಯ ವಿಚಾರವಿಲ್ಲ. ನ್ಯಾಯಾಮೃತವಾಗಿರಬಹುದೇ ? ಅಲ್ಲೇನೊ ನಾಲ್ಕನೇ ಭಂಗದಲ್ಲಿ ಈ ವಿಚಾರವಿದೆ ಆದರೆ ಆ ಗ್ರಂಥಕ್ಕೆ "ಸತ್ತರ್ಕ ವಿಲಾಸ"ವೆಂಬ ಹೆಸರು ಪ್ರಸಿದ್ಧಿಯಿಲ್ಲ. ಆದ್ದರಿಂದ ಇದೊಂದು ಈವರೆಗೆ ಅನುಪಲಬ್ಧವಾದ ಕೃತಿಯಾಗಿರಬಹುದೇ ?

---

o o o

# ಪ್ರಮಾಣತ್ರಯದಲ್ಲಿ ಪ್ರತ್ಯಕ್ಷದ ಸ್ಥಾನ

---

ಪಿ. ಕೇಶವ ಬಾಯರಿ

"ಮಾನಾಧೀನಾ ಮೇಯಸಿದ್ಧಿಃ" ಎಂಬಂತೆ ಯಾವ ಪದಾರ್ಥ ಸಿದ್ಧಿಸಬೇಕಾದರೂ ಪ್ರಮಾಣ ಬೇಕು. ಆ ಪ್ರಮಾಣಗಳು ಪ್ರತ್ಯಕ್ಷ, ಅನುಮಾನ ಶಬ್ದಗಳೆಂದು ಮೂರುವಿಧ. ಅವುಗಳಲ್ಲಿ ಪ್ರತ್ಯಕ್ಷವು ಪ್ರಬಲವೆಂದು ನಮ್ಮ ಆಚಾರ್ಯರ ಸಿದ್ಧಾಂತ. ಆದ್ದರಿಂದಲೇ ಜಗತ್ತು ಸುಳ್ಳು ಎಂದು ಮಾಯಾವಾದಿಗಳು ಹೇಳಿದಾಗ ಅವರ ಸಿದ್ಧಾಂತ ಪ್ರತ್ಯಕ್ಷ ವಿರುದ್ಧ, ಪ್ರತ್ಯಕ್ಷವು ಇತರ ಪ್ರಮಾಣಗಳಿಗಿಂತ ಪ್ರಬಲ ಎಂದು ಆಚಾರ್ಯರು ಪ್ರತಿಪಾದಿಸಿದ್ದಾರೆ. ಪ್ರತ್ಯಕ್ಷ ಏಕೆ ಇತರ ಪ್ರಮಾಣಗಳಿಗಿಂತ ಪ್ರಬಲ ಎಂದು ವಿಚಾರಿಸೋಣ.

**ಪ್ರತ್ಯಕ್ಷವು ಸ್ವಭಾವತಃ ಪ್ರಬಲ :** ಸಿಂಹದ ಗರ್ಜನೆಯನ್ನು ಕೇಳಿ ಹತ್ತಿರದಲ್ಲಿ ಸಿಂಹವಿದೆ ಎಂದು ಅನುಮಾನ ಪ್ರಮಾಣದಿಂದಲೂ ತಿಳಿಯಬಹುದು. ಮಿತ್ರನ ಮಾತಿನಿಂದಲೂ ತಿಳಿಯಬಹುದು. ಪ್ರತ್ಯಕ್ಷವಾಗಿ ನೋಡಿಯೂ ತಿಳಿಯಬಹುದು. ಪ್ರತ್ಯಕ್ಷದಿಂದ ಬಂದ ಜ್ಞಾನ ಇತರ ಪ್ರಮಾಣಗಳಿಂದ ಬಂದ ಜ್ಞಾನಕ್ಕಿಂತ ಹೆಚ್ಚು ಸ್ಪಷ್ಟ. ಪ್ರತ್ಯಕ್ಷವು ಸಿಂಹದಲ್ಲಿರುವ ರೇಖೆ, ಉಪರೇಖೆ, ಬಣ್ಣ, ಇತರ ಅವಯವಗಳನ್ನೂ ಸ್ಪಷ್ಟವಾಗಿ ತಿಳಿಸುತ್ತದೆ. ಪೂರ್ವ ದಿಕ್ಕನ್ನು ನೋಡಿ ಇದು ಪಶ್ಚಿಮವೆಂದು ಭ್ರಾಂತಿ ಬಂದಾಗ ಸೂರ್ಯೋದಯ ಈ ದಿಕ್ಕಿನಲ್ಲಿ ಆಗಿದೆ ಇದರಿಂದ ಇದು ಪೂರ್ವ ಎಂದು ಅನುಮಾನ (ಹೇತು) ದಿಂದ ಸಾಧಿಸಬಹುದು. ಆದರೆ ಸೂರ್ಯೋದಯವನ್ನು ಪ್ರತ್ಯಕ್ಷವಾಗಿ ಕಾಣದೇ ಇಲ್ಲಿ ಅನುಮಾನ ಪ್ರವೃತ್ತಿಯಾಗಲಾರದು. ಪ್ರತ್ಯಕ್ಷವು ಇತರ ಪ್ರಮಾಣಗಳನ್ನು ಅಪೇಕ್ಷಿಸದೇ ಸ್ವಯಂ ನಿರ್ಣಯಿಸುತ್ತದೆ. ಆದ್ದರಿಂದ ಪ್ರತ್ಯಕ್ಷವು ಸ್ವಾಭಾವಿಕವಾಗಿಯೇ ಪ್ರಬಲ.

**ಉಪಜೀವ್ಯವಾದ್ದರಿಂದಲೂ ಪ್ರತ್ಯಕ್ಷವು ಪ್ರಬಲ :** ಪ್ರತ್ಯಕ್ಷವು ಇತರ ಪ್ರಮಾಣಗಳಿಗೆ ಉಪಜೀವ್ಯ. ಅಂದರೆ ಪ್ರತ್ಯಕ್ಷದ ಸಹಾಯವನ್ನು ಅಪೇಕ್ಷಿಸಿಯೇ ಇತರ ಪ್ರಮಾಣಗಳು ಪ್ರವೃತ್ತವಾಗುತ್ತವೆ. ಅನುಮಾನದ ಪಕ್ಷ, ಹೇತು, ವ್ಯಾಪ್ತ್ಯಾದಿಗಳು ಪ್ರತ್ಯಕ್ಷದಿಂದಲೇ ಸಿದ್ಧಿಸುತ್ತವೆ. ಯಾವುದಾದರೂ ಒಂದು ರೀತಿಯಿಂದ

ಅನುಮಾನಕ್ಕೆ ಪ್ರತ್ಯಕ್ಷದ ಸಹಾಯ ಬೇಕೇ ಬೇಕು. ಶಬ್ದದಿಂದ ಬರುವ ಶಾಬ್ದ ಬೋಧ (ವಾಕ್ಯದಿಂದ ಬರುವ ಜ್ಞಾನ) ಕ್ಕೂ ಶ್ರವಣೇಂದ್ರಿಯದಿಂದ ಬರುವ ಶಬ್ದದ ಪ್ರತ್ಯಕ್ಷದ ಅಪೇಕ್ಷೆ ಇದೆ ಆದ್ದರಿಂದ ಶಾಬ್ದಬೋಧಕ್ಕೂ ಪ್ರತ್ಯಕ್ಷವು ಉಪಜೀವ್ಯ. ಉಪಜೀವ್ಯವು ಪ್ರಬಲ ಎಂಬುದೂ ಎಲ್ಲರಿಗೂ ಸಮ್ಮತ. ಉಪಜೀವ್ಯ ವಿರೋಧ ಯುಕ್ತವಲ್ಲ. ಉಂಡಮನೆಗೇ ಕೇಡು ಬಗೆದಂತೆ, ತನಗೆ ಜನ್ಮವಿತ್ತ ತಾಯಿಯನ್ನೇ ಸಂಹರಿಸಿದಂತೆ. ಉಪಜೀವ್ಯವಾದ ಪ್ರತ್ಯಕ್ಷ ಜಗತ್ತನ್ನು ಸತ್ಯವೆಂದೂ, ಎಲ್ಲ ಪದಾರ್ಥಗಳಿಗೂ ಹಾಗೇ ಜೀವೇಶ್ವರರಿಗೂ ಭೇದವಿದೆಯೆಂದೂ ಗ್ರಹಿಸುತ್ತದೆ. ಇತರ ಪ್ರಮಾಣಗಳು ಜಗತ್ಸತ್ಯತ್ವವನ್ನು, ನಿರಾಕರಿಸಲು ಸಮರ್ಥಗಳಾಗಲಾರವು.

**ಜಗತ್ಸತ್ಯತ್ವದ ಮತ್ತು ಭೇದದ ಗ್ರಹಣ ಪ್ರತ್ಯಕ್ಷದಿಂದ ಹೇಗೆ ? :** ನಾವು ಇಂದ್ರಿಯಗಳಿಂದ ಯಾವ ವಸ್ತುವನ್ನು ತಿಳಿಯುವಾಗಲೂ ಅದನ್ನು ಸತ್ಯವೆಂದೇ ತಿಳಿಯುತ್ತೇವೆ. ಆದ್ದರಿಂದಲೇ ಬೇಕಾದ ವಸ್ತುವನ್ನು ಸ್ವೀಕರಿಸುವ, ಬೇಡವಾದದ್ದನ್ನು ನಿರಾಕರಿಸುವ ಮುಂತಾದ ಪ್ರವೃತ್ತಿಗಳು ಕೂಡುತ್ತವೆ. ಸತ್ಯವೆಂದು ತಿಳಿಯದಿದ್ದರೆ ಅಥವಾ ಸುಳ್ಳೆಂದೇ ತಿಳಿದರೆ ಈ ಪ್ರವೃತ್ತಿಗಳು ಕೂಡಲಾರವು. ಎಲ್ಲೋ ಕೆಲವೊಮ್ಮೆ ದೋಷದಿಂದ ಚಿಪ್ಪನ್ನು ಬೆಳ್ಳಿಯೆಂದು ಗ್ರಹಿಸಬಹುದು. ಪರೀಕ್ಷಿಸಿದಾಗ ಇದು ಬೆಳ್ಳಿಯಲ್ಲವೆಂಬ ಬಾಧಜ್ಞಾನದಿಂದ ಬೆಳ್ಳಿಯು ಸುಳ್ಳೆಂದು ಗೊತ್ತಾಗುವುದು. ಆದರೆ ಜಗತ್ತಿನ ನಾವು ಕಾಣತಕ್ಕ ವಸ್ತುಗಳೆಲ್ಲ ಸತ್ಯವೆಂಬ ಪ್ರತ್ಯಕ್ಷಕ್ಕೆ ಬಾಧ (ಇದು ಸುಳ್ಳೆಂಬ ಜ್ಞಾನ) ಯಾವತ್ತೂ ಎಷ್ಟು ಪರೀಕ್ಷಿಸಿದರೂ ಬಾರದಿದ್ದರೂ ಇನ್ನು ಮುಂದೆ ಎಂದಾದರೊಮ್ಮೆ ಈ ಪ್ರತ್ಯಕ್ಷ ಬರಬಹುದು ಎಂಬುದಾಗಿ ನಿಷ್ಕಾರಣ ಸಂಶಯವನ್ನು ಮಾಡಬಾರದು. ಇಂಥಹ ಸಂಶಯವನ್ನು ಮಾಡುತ್ತಾ ಹೋದರೆ ನಿಶ್ಚಯರೂಪವಾದ ಜ್ಞಾನ ಎಂದೆಂದಿಗೂ ಬರಲಾರದು. ಅಂಥಹ ಸರ್ವತ್ರ ಸಂಶಯವನ್ನೆ ಮಾಡತಕ್ಕವನು "ಸಂಶಯಾತ್ಮಾ ವಿನಶ್ಯತಿ" ಯಾಗುತ್ತಾನೆ. ಈ ರೀತಿ ನಿಶ್ಚಯ ರೂಪವಾದ ಪ್ರತ್ಯಕ್ಷ ಜಗತ್ತು ಸತ್ಯವೆಂದೇ ಗ್ರಹಿಸುತ್ತದೆ.

ಪ್ರತ್ಯಕ್ಷವು ವಸ್ತುಗಳಿಗೆ ಭೇದವನ್ನೂ ಗ್ರಹಿಸುತ್ತದೆ. ಅನೇಕ ವಸ್ತುಗಳನ್ನು ನಾವು ನೋಡುವಾಗ ಅವುಗಳಲ್ಲಿ ವಿರುದ್ಧ ಧರ್ಮಗಳನ್ನು ನೋಡುತ್ತೇವೆ. ಹಾಗೆಯೇ ಭೇದವನ್ನೂ ನೋಡಿಯೇ ನೋಡುತ್ತೇವೆ. ಪರಮಾತ್ಮ ಸರ್ವಜ್ಞ, ಸರ್ವಕರ್ತ, ಸರ್ವಗುಣಪರಿಪೂರ್ಣ ಮೊದಲಾದ ರೀತಿಯಿಂದ ವೇದದಿಂದ ತಿಳಿಯುತ್ತೇವೆ. ಜೀವಾತ್ಮನಂತೂ ಅಲ್ಪಜ್ಞ ದೋಷಪೂರ್ಣ ಎಂಬುದಾಗಿ ಎಲ್ಲರಿಗೂ ತಿಳಿದಿದೆ. ಆದ್ದರಿಂದ ವಿರುದ್ಧ ಧರ್ಮವುಳ್ಳ ಜೀವನು ಪರಮಾತ್ಮನಿಂದ ಭಿನ್ನನೆಂದೇ ಎಲ್ಲರಿಂದಲೂ ಪ್ರತ್ಯಕ್ಷರಿಂದ ತಿಳಿಯಲ್ಪಡುತ್ತಾನೆ. ಈ ರೀತಿ ಸ್ವಭಾವತಃ ಪ್ರಬಲವಾದ ಉಪಜೀವ್ಯವಾದ್ದರಿಂದಲೂ ಪ್ರಬಲವಾದ ಪ್ರತ್ಯಕ್ಷದಿಂದ ಸಿದ್ಧವಾದ ಜಗತ್ಸತ್ಯತ್ವ ಮತ್ತು ಭೇದವನ್ನು ಯಾವ ಪ್ರಮಾಣಗಳೂ ಬಾಧಿಸಲಾರವು.

**ಈ ಪ್ರತ್ಯಕ್ಷಪ್ರಾಬಲ್ಯವನ್ನು ಶಂಕರಾಚಾರ್ಯರೂ ಒಪ್ಪಿದ್ದಾರೆ :** "ತತ್‌ತ್ವಮಸಿ ಎಂಬ ಶ್ರುತಿವಾಕ್ಯವು ಜೀವಬ್ರಹ್ಮರಿಗೆ ಅಭೇದವನ್ನು ಹೇಳುವಂತೆ ಕಾಣುತ್ತದೆ. ಆದರೆ ಇದು ಪ್ರತ್ಯಕ್ಷ ವಿರುದ್ಧವಾದ್ದರಿಂದ ಪ್ರತ್ಯಕ್ಷ ವಿರೋಧಬಾರದಿರುವಂತೆ ತತ್ ತ್ವಂ ಎಂಬ ಎರಡೂ ಪದಗಳಿಗೂ ಗೌಣವಾಗಿ ಅರ್ಥ ಮಾಡಬೇಕು. ಜೀವ ಮತ್ತು ಬ್ರಹ್ಮಶಬ್ದಾರ್ಥಗಳ ಒಳಗೆ ಸೇರಿಕೊಂಡಿರುವ ಶುದ್ಧ ಚೇತನರಿಗೆ ಐಕ್ಯವನ್ನು ಶ್ರುತ್ಯರ್ಥವನ್ನಾಗಿ ಹೇಳಬೇಕು." ಎಂದು ಹೇಳುವ ಶಂಕರರೂ ಪ್ರತ್ಯಕ್ಷವನ್ನು ಶ್ರುತಿಗಿಂತ ಪ್ರಬಲವೆಂದು ಒಪ್ಪಿದಂತಾಯಿತು.

**ಪ್ರತ್ಯಕ್ಷ ಪ್ರಾಬಲ್ಯ ಮೀಮಾಂಸಕರಿಗೂ ಸಮ್ಮತ :** ಯಜಮಾನಃ ಪ್ರಸ್ತರಃ ಎಂಬುದೊಂದು ಶ್ರುತಿವಾಕ್ಯ. ಯಾಗದ ಯಜಮಾನನನ್ನು ಪ್ರಸ್ತರ ಎಂದರೆ ದರ್ಭ ಮುಷ್ಟಿ (ಮುಷ್ಟಿದರ್ಭ) ಎಂದು ಕರೆಯಲಾಗಿದೆ. ಯಜಮಾನ ಚೇತನ. ದರ್ಭ ಮುಷ್ಟಿ ಜಡ. ಇವುಗಳಿಗೆ ಅಭೇದ ಪ್ರತ್ಯಕ್ಷ ವಿರುದ್ಧ. ಪ್ರತ್ಯಕ್ಷ ವಿರುದ್ಧವಾದ ಅರ್ಥ ವನ್ನು ಶ್ರುತಿಯೂ ಹೇಳಲಾರದು. ಆದ್ದರಿಂದ ಯಜಮಾನ ಶಬ್ದಕ್ಕೆ ಗೌಣವಾಗಿ ಯೇ ಯಜಮಾನ ಪ್ರತಿನಿಧಿಯನ್ನಾಗಿಟ್ಟುಕೊಂಡು ಯಾಗ ಕಾರ್ಯವನ್ನು ಮುಗಿಸ ಬೇಕೆಂದು ಈ ವಾಕ್ಯದ ಅಭಿಪ್ರಾಯವೆಂದು ಮೀಮಾಂಸಕರೂ ಹೇಳಿದ್ದಾರೆ. ಅವರೂ ಪ್ರತ್ಯಕ್ಷ ಪ್ರಾಬಲ್ಯವನ್ನು ಒಪ್ಪಿದ್ದಾರೆ.

ದ್ರವ್ಯವಾದ್ದರಿಂದ ಬೆಂಕಿಯು ನೀರಿನಂತೆ ಶೀತವೆಂದು ಯಾರಾದರೂ ಅನುಮಾನವನ್ನು ಪ್ರಯೋಗಿಸಿದರೆ ಇದು ಪ್ರತ್ಯಕ್ಷವಿರುದ್ಧವೆಂದು ಎಲ್ಲರೂ ಹೇಳುತ್ತಾರೆ. ಆದ್ದರಿಂದ ಪ್ರತ್ಯಕ್ಷ ಇತರ ಎಲ್ಲಾ ಪ್ರಮಾಣಗಳಿಗಿಂತ ಪ್ರಬಲ. ಇದು ಪ್ರತ್ಯಕ್ಷ ಯೋಗ್ಯವಾದ ವಿಷಯಗಳಲ್ಲಿ ಮಾತ್ರ. ಪ್ರತ್ಯಕ್ಷಯೋಗ್ಯವಲ್ಲದ ಧರ್ಮ, ಅಧರ್ಮ, ಸ್ವರ್ಗ ನರಕಾದಿ ವಿಷಯಗಳಲ್ಲಿ ಮಾತ್ರ ಆಗಮವೇ ಪ್ರಬಲವೆಂದು ನಿರ್ಣಯ.

---

## ಮಿಥ್ಯಾ ಶಬ್ದಾರ್ಥ

ಉಪನಿಷತ್ತು ಈ ಪ್ರಪಂಚವನ್ನು ಮಿಥ್ಯಾ ಎಂದಿದ್ದಿದೆ. ಆದರೆ ಅದ್ವೈತವಾದ ಹೇಳುವಂತೆ ಈ ಶಬ್ದಕ್ಕೆ ಜಗತ್ತು ಸ್ವಪ್ನದಂತೆ ಸುಳ್ಳು ಎಂದರ್ಥವಲ್ಲ. 'ಮಿಥ್ಯೈವ ವ್ಯವಸಾಯಃ ತೇ' ಎಂಬ ಗೀತಾ ವಾಕ್ಯಕ್ಕೆ ನಿನ್ನ ಪ್ರಯತ್ನ ವ್ಯರ್ಥ ಎಂದು ಅರ್ಥ. ಹೊರತು ಸುಳ್ಳು ಎಂದಲ್ಲ. ವ್ಯಾಕರಣ ಶಾಸ್ತ್ರದಲ್ಲಿ 'ಪದಂ ಮಿಥ್ಯಾ ಕಾರಯತಿ' ಎಂಬುದಕ್ಕೆ 'ಸ್ವರಾದಿ ದುಷ್ಟಂ ಅಸಕೃದುಚ್ಚಾರಯತೀತ್ಯರ್ಥಃ' ಎಂದು 'ದುಷ್ಟ' ಎಂದರ್ಥವನ್ನು 'ಮಿಥ್ಯಾ' ಶಬ್ದಕ್ಕೆ ಹೇಳಿದ್ದಾರೆ. ಆದ್ದರಿಂದ ಬ್ರಹ್ಮಾಪೇಕ್ಷೆಯಿಂದ ಈ ಜಗತ್ತು ವ್ಯರ್ಥ, ದುಷ್ಟವಾದ್ದರಿಂದ ಇದು 'ಮಿಥ್ಯಾ'. ಹೊರತು ಸುಳ್ಳಲ್ಲ.

ನ್ಯಾಯಾಮೃತ.

---

# ನ್ಯಾಯಾಮೃತದ
# ಖಂಡನ ಮಂಡನ ಗ್ರಂಥಗಳು

ವಿದ್ವಾನ್. ಆರ್. ಜಿ. ಮಾಳಗಿ. ಎಂ. ಎ.

1. **ನ್ಯಾಯಾಮೃತ :** ಶ್ರೀ ವ್ಯಾಸತೀರ್ಥರು ರಚಿಸಿದ ಗ್ರಂಥಗಳಲ್ಲಿ ಒಂದು ನ್ಯಾಯಾಮೃತ. ಕೇವಲ ಅದ್ವೈತಸಿದ್ಧಾಂತದ ವಿಮರ್ಶೆಗಾಗಿಯೇ ವ್ಯಾಸತೀರ್ಥರು ಈ ಗ್ರಂಥ ರಚಿಸಿದ್ದಾರೆ. ನ್ಯಾಯಾಮೃತದ ನಂತರ 10-11 ಖಂಡನ ಮಂಡನ ಗ್ರಂಥಗಳು ರಚಿತವಾಗಿವೆ. ವ್ಯಾಸತೀರ್ಥರಿಂದ ಆರಂಭಿಸಿ 250–300 ವರ್ಷಗಳಲ್ಲಿ ದ್ವೈತಾದ್ವೈತವಾದ ವಿವಾದ ಪ್ರವಾಹವೇ ಸಮಗ್ರ ಭಾರತದಲ್ಲಿ ಹರಿದಿದೆ. ಈ ಪ್ರವಾಹಕ್ಕೆ ಮೂಲ ಕಾರಣ ಹಾಗು ಸ್ಫೂರ್ತಿದಾಯಕ ಗ್ರಂಥ ನ್ಯಾಯಾಮೃತ. ಇದರಿಂದಲೇ ನಾವು ನ್ಯಾಯಾಮೃತಗ್ರಂಥದ ಗಾಂಭೀರ್ಯವನ್ನು ಅರಿಯ ಬಹುದಾಗಿದೆ.

2. 1) **ಅದ್ವೈತ ದೀಪಿಕಾ** 2) **ಭೇದಧಿಕ್ಕಾರ**
ನೃಸಿಂಹಾಶ್ರಮರು ಬರೆದ ಈ ಎರಡು ಗ್ರಂಥಗಳಲ್ಲಿ ನ್ಯಾಯಾಮೃತದಲ್ಲಿ ಬರುವ ಕೆಲವು ಅಂಶಗಳನ್ನು ಮಾತ್ರ ಖಂಡಿಸಲು ಪ್ರಯತ್ನಿಸಲಾಗಿದೆ.

3. ಅನಂತರದಲ್ಲಿ ಬಂದ ಅಪ್ಪಯ್ಯದೀಕ್ಷಿತರೂ ತಮ್ಮ ಗಂಥ್ರಗಳಲ್ಲಿ ನ್ಯಾಯಾಮೃತದಲ್ಲಿಹೇಳಿರುವ ದೋಷಗಳನ್ನು ಖಂಡಿಸಲು ಪ್ರಯತ್ನಿಸಿದ್ದಾರೆ.

4. ನೃಸಿಂಹಾಶ್ರಮರು ಹಾಗು ಅಪ್ಪಯ್ಯ ದೀಕ್ಷಿತರು ಮಾಡಿರುವ ನ್ಯಾಯಾಮೃತದ ಖಂಡನೆಗಳನ್ನು ಶ್ರೀ ವ್ಯಾಸತೀರ್ಥರ ಶಿಷ್ಯರಾದ ವಿಜಯೀಂದ್ರರು ಸಮಗ್ರವಾಗಿ ಖಂಡಿಸಿದ್ದಾರೆ. ಗುರುಗಳ ಪರಮಾನುಗ್ರಹಕ್ಕೆ ಪಾತ್ರರಾದ ವಿಜಯೀಂದ್ರರು 104 ಗ್ರಂಥಗಳಿಗಿಂತಲೂ ಹೆಚ್ಚು ಗ್ರಂಥಗಳನ್ನು ರಚಿಸಿ ದ್ವೈತಸಿದ್ಧಾಂತದ ವಿಜಯ ಪತಾಕೆಯನ್ನು ದಿಗಂತದಲ್ಲಿ ಹಾರಿಸಿದ ಮಹಾ ಮೇಧಾವಿಗಳು.

5. **ಅದ್ವೈತಸಿದ್ಧಿ :** ಇದು ಮಧುಸೂದನ ಸರಸ್ವತಿಗಳು (1540–1600) ಬರೆದ ನ್ಯಾಯಾಮೃತದ ಖಂಡನ ಗ್ರಂಥ. ಮಧುಸೂದನ ಸರಸ್ವತಿಯವರು ಬಂಗಾಲ

ದವರು. ದೊಡ್ಡ ಪ್ರಮಾಣದಲ್ಲಿ ನ್ಯಾಯಾಮೃತಕ್ಕೆ ಖಂಡನೆಯನ್ನು ಮಾಡಿರುತ್ತಾರೆ. ಮಧುಸೂದನ ಸರಸ್ವತಿಯವರು ಅದ್ವೈತ ಸಿದ್ಧಾಂತದ ಪ್ರತಿಭಾವಂತ ಗ್ರಂಥಕಾರರಲ್ಲಿ ಒಬ್ಬರು. ನ್ಯಾಯಾಮೃತವನ್ನು ಖಂಡಿಸಲು ಬೇಕಾಗಿರುವ ಅನೇಕ ಶಾಸ್ತ್ರಗಳ ಆಳವಾದ ಪಾಂಡಿತ್ಯ ಅವರಿಗೆ ಇತ್ತು.

6. **ತರಂಗಿಣೀ :** ಈ ಗ್ರಂಥವನ್ನು ರಚಿಸಿ ತರಂಗಿಣೀ ರಾಮಾಚಾರ್ಯರು ಎಂಬುದಾಗಿಯೇ ಜನರಿಗೆ ಪರಿಚಿತರಾಗಿರುವವರು ವ್ಯಾಸ ರಾಮಾಚಾರ್ಯರು (1550-1620) 'ವ್ಯಾಸ' ಎಂಬುದು ಇವರ ಮನೆತನದ ಹೆಸರು. ಆಂಧ್ರ ಪ್ರದೇಶದವರಾದ ರಾಮಾಚಾರ್ಯರು ಉತ್ತರಾದಿ ಮಠದ ಪರಂಪರೆಯಲ್ಲಿ ಬಂದಿರುವ ರಘುನಾಥ ತೀರ್ಥರಲ್ಲಿ ಶಾಸ್ತ್ರವ್ಯಾಸಂಗ ಮಾಡಿದರು. ಇವರು ತರಂಗಿಣೀ ಗ್ರಂಥದಲ್ಲಿ ಅದ್ವೈತಸಿದ್ಧಿ ಗ್ರಂಥವನ್ನು ಸಮಗ್ರವಾಗಿ ಖಂಡಿಸಿದ್ದಾರೆ. ಅದ್ವೈತ ಶಾಸ್ತ್ರದ ಪ್ರಮೇಯಗಳನ್ನು ಯಥಾವತ್ತಾಗಿ ಅನುವಾದಿಸಿ ಆ ಪ್ರಮೇಯಗಳನ್ನು ಖಂಡಿಸಿರುವುದು ಈ ಗ್ರಂಥದ ವೈಶಿಷ್ಟ್ಯ. ವ್ಯಕ್ತಿನಿಂದೆಯನ್ನು ಮಾಡದೇ ಯಾವ ವ್ಯಕ್ತಿಯ ಹೆಸರನ್ನು ಹೇಳದೇ ಕೇವಲ ವಸ್ತು ನಿಷ್ಠವಾದ ವಿಮರ್ಶೆಯನ್ನು ಮಾಡಿರುವುದು ಈ ಗ್ರಂಥದ ಇನ್ನೊಂದು ವೈಶಿಷ್ಟ್ಯವಾಗಿದೆ.

7. **ನ್ಯಾಯಾಮೃತ ಕಂಟಕೋದ್ಧಾರ :** ತರಂಗಿಣೀ ರಾಮಾಚಾರ್ಯರ ಸಮಕಾಲೀನರಾದ ಆನಂದಭಟ್ಟಾರಕರು (1535-1615) ನ್ಯಾಯಾಮೃತ ಕಂಟಕೋದ್ಧಾರವನ್ನು ರಚಿಸಿದರು. ಇವರು ಉತ್ತಾರಾದಿ ಮಠದ ಪರಂಪರೆಯಲ್ಲಿ ಬರುವ ವಿದ್ಯಾಧೀಶರ ಪೂರ್ವಾಶ್ರಮದ ತಂದೆಯವರು ಗ್ರಂಥದ ಹೆಸರೇ ಸೂಚಿಸುವಂತೆ ನ್ಯಾಯಾಮೃತ ಗ್ರಂಥಕ್ಕೆ ತಗಲಿರುವ ಮುಳ್ಳನ್ನು ಕಿತ್ತು ಹಾಕುವಂಥ ಶ್ರೇಷ್ಠವಾದ ಗ್ರಂಥವನ್ನು ಇವರು ರಚಿಸಿದರು, ಈ ಗ್ರಂಥವು ಅದ್ವೈತಸಿದ್ಧಿಯ ಖಂಡನ ರೂಪವಾಗಿದೆ. ತರಂಗಿಣಿಯಲ್ಲಿ ಇಲ್ಲದಿರುವ ಕೆಲವು ಹೊಸ ವಿಷಯಗಳನ್ನು ನಾವು ಈ ಗ್ರಂಥದಲ್ಲಿ ಕಾಣಬಹುದಾಗಿದೆ.

8. 1) **ಗುರುಚಂದ್ರಿಕಾ** 2) **ಲಘು ಚಂದ್ರಿಕಾ**

ಬ್ರಹ್ಮಾನಂದ ಸರಸ್ವತಿಯವರು ಬರೆದ ಈ ಗ್ರಂಥಗಳು ತರಂಗಿಣಿಯ ಖಂಡನ ಗ್ರಂಥಗಳಾಗಿವೆ. ಗುರು ಚಂದ್ರಿಕಾವನ್ನು ಬರೆದು ತರಂಗಿಣಿಯನ್ನು ಖಂಡಿಸಿ ಅಷ್ಟಕ್ಕೆ ತೃಪ್ತರಾಗದ ಬ್ರಹ್ಮಾನಂದ ಸರಸ್ವತಿಯವರು ಲಘು ಚಂದ್ರಿಕಾ ಎಂಬ ಮತ್ತೊಂದು ಗ್ರಂಥವನ್ನು ತರಂಗಿಣಿಯ ಖಂಡನೆಗಾಗಿ ರಚಿಸಿದರು. ಈ ಗ್ರಂಥಕ್ಕೆ ಗೌಡಬ್ರಹ್ಮಾನಂದಿ ಎಂಬ ಹೆಸರೂ ಪ್ರಚಲಿತವಾಗಿದೆ,

9. 1) **ತರಂಗಿಣೀ ಸೌರಭ ;** ಬ್ರಹ್ಮಾನಂದ ಸರಸ್ವತಿಯವರ ಅನಂತರದವರಾದ ಉತ್ತರ ಭಾರತದವರಾದ ವನಮಾಲಿ ಮಿಶ್ರರು (1650–1720) ತರಂಗಿಣೀ ಸೌರಭ ಎಂಬ ಗ್ರಂಥವನ್ನು ರಚಿಸಿದರು. ಗ್ರಂಥದ ಹೆಸರೇ ಸೂಚಿಸುವಂತೆ ಈ

ಗ್ರಂಥವು ಗುರು ಚಂದ್ರಿಕಾಗ್ರಂಥವನ್ನು ಖಂಡಿಸಿ ತರಂಗಿಣಿಯಲ್ಲಿರುವ ಸೌರಭವನ್ನು ಎತ್ತಿ ತೋರಿಸುತ್ತದೆ.

2) **ನ್ಯಾಯಾಮೃತ ಸೌಗಂಧ್ಯ** : ಇದು ವನಮಾಲಿಮಿಶ್ರರ ಇನ್ನೊಂದು ಕೃತಿ. ಇದು ಬ್ರಹ್ಮಾನಂದ ಸರಸ್ವತಿಯವರ ಲಘುಚಂದ್ರಿಕಾದ ಖಂಡನ ರೂಪವಾಗಿದೆ, ಲಘುಚಂದ್ರಿಕಾ ಗ್ರಂಥವನ್ನು ಖಂಡಿಸಿ ನ್ಯಾಯಾಮೃತ ಸುಗಂಧವನ್ನು ಲೋಕಕ್ಕೆ ಪಸರಿಸಿದಕೀರ್ತಿಯು ವನಮಾಲಿ ಮಿಶ್ರರಿಗೆ ಸೇರುತ್ತದೆ.

10. **ವಿಠಲೇಶೋಪಾಧ್ಯಾಯೀ** : ಈ ಗ್ರಂಥವನ್ನು ರಚಿಸಿದವರುವಿಠಲೇಶೋಪಾಧ್ಯಾಯರು. ಈ ಗ್ರಂಥವು ಲಘು ಚಂದ್ರಿಕಾ ವ್ಯಾಖ್ಯಾನ ರೂಪವಾಗಿದೆ. ಹಾಗೂ ತರಂಗಿಣೀ ಖಂಡನ ರೂಪವಾಗಿದೆ.

ಹೀಗೆ ವ್ಯಾಸತೀರ್ಥರ ಕಾಲದಲ್ಲಿ ಮತ್ತು ಅವರ ನಂತರದ 250-300ವರ್ಷಗಳಲ್ಲಿ ದ್ವೈತಾದ್ವೈತ ಚರ್ಚೆಯು ಅಖಿಲ ಭಾರತ ಮಟ್ಟದ ವ್ಯಾಪ್ತಿಯನ್ನು ಪಡೆದಿತ್ತು. ಇಪ್ಪತ್ತನೆಯ ಶತಮಾನದವರಾದ ಅನಂತ ಕೃಷ್ಣ ಶಾಸ್ತ್ರಿಗಳು ತಾವು ಸಂಪಾದಿಸಿ ಮುದ್ರಿಸಿರುವ ಅದ್ವೈತಸಿದ್ಧಿ ಗ್ರಂಥ ಮುನ್ನುಡಿಯಲ್ಲಿ. ವಿಠಲೇಶೋಪಾಧ್ಯಾಯೀ ಗ್ರಂಥದ ಅನಂತರವೂ 'ನ್ಯಾಯಭಾಸ್ಕರ' 'ನ್ಯಾಯೇಂದುಶೇಖರ' ಮುಂತಾದ ಖಂಡನ ಮಂಡನಗ್ರಂಥಗಳು ಹೊರಟಿವೆ ಎಂಬುದಾಗಿ ಹೆಸರಿಸಿರುವುದನ್ನು ನಾವು ಕಾಣಬಹುದಾಗಿದೆ.

---

## ಅಸತ್ ಶಬ್ದಾರ್ಥ

ಶ್ರುತಿ ಪುರಾಣಗಳಲ್ಲಿ ಜಗತ್ತನ್ನು 'ಅಸತ್' ಎಂದು ಹೇಳಿದ್ದರೆ ಆ ಶಬ್ದಕ್ಕೆ ಹೀಗೆ ಅರ್ಥೈಸಬೇಕು. 'ಸದ್ಭಾವೇ ಸಾಧುಭಾವೇಚ ಸದಿತ್ಯೇತತ್ ಪ್ರಯುಜ್ಯತೇ' ಎಂಬ ಗೀತಾ ವಾಕ್ಯ ಸತ್ ಶಬ್ದಕ್ಕೆ ಸದ್ಭಾವ= ಒಳ್ಳೆತನ ಎಂದು ಅರ್ಥ ಹೇಳುತ್ತದೆ. ಅಸತ್ ಎಂದರೆ ಅಸಜ್ಜನ ಅಸಾಧು ಎಂದರ್ಥ 'ನಾಸತ್ ಪುರುಷಂ ಸಮಾಶ್ರಯೀತ' ಎಂದರೆ ಕೆಟ್ಟವನೊಂದಿಗೆ ಸಹವಾಸ ಮಾಡಬೇಡ ಎಂದರ್ಥ. ಆದ್ದರಿಂದ ಜಗತ್ತು ಅಸತ್ ಎಂದರೆ ದುಃಖಕ್ಕೆ ಕಾರಣವಾದ್ದರಿಂದ ಅಶುಭ, ಅಸಾಧು ಎಂದರ್ಥ. ಮಹಾಭಾರತ 'ಅಸ್ವಾತಂತ್ರ್ಯಾತ್ತು, ಅನ್ಯೇಷಾಂ ಅಸತ್ವಂ ವಿದ್ಧಿ ಭಾರತ' ಎಂದು ಬ್ರಹ್ಮನನ್ನು ಬಿಟ್ಟು ಉಳಿದವು ಅಸ್ವತಂತ್ರವಾದುದರಿಂದ ಅದನ್ನು ಅಸತ್ ಎಂದು ಕರೆದಿದೆ. ಆದ್ದರಿಂದ ಅಸತ್ ಶಬ್ದಕ್ಕೆ ಮಿಥ್ಯಾ ಎಂದರ್ಥವಿಟ್ಟುಕೊಳ್ಳಬಾರದು.

ನ್ಯಾಯಾಮೃತ.

---

# ತರ್ಕತಾಂಡವದಲ್ಲಿ ಪ್ರಾಮಾಣ್ಯವಾದದ ಭಂಗಿ

ಕೆ. ಹಯವದನ ಪುರಾಣಿಕ, ಬೆಂಗಳೂರು.

**ಜ್ಞಾ**ನವು ಯಥಾರ್ಥವೆ ಅಲ್ಲವೆ ಎಂಬುದನ್ನು ಪರೀಕ್ಷೆಯಿಂದಲೆ ನಿರ್ಧರಿಸ ಬೇಕೆನ್ನುತ್ತವೆ ಕಣಾದ, ಗೌತಮರ ತರ್ಕಶಾಸ್ತ್ರ. ಬಾದರಾಯಣರ ಬ್ರಹ್ಮತರ್ಕ ಸಿದ್ಧಾಂತ ಹಾಗಲ್ಲ. ಜ್ಞಾನದ ಯಥಾರ್ಥತೆ ಸಾಕ್ಷ್ಯನುಭವದಲ್ಲಿಯೆ ಸ್ವಯಂ ವೇದ್ಯ. ಸಂದೇಹಕ್ಕೆ ಅವಕಾಶವಿರುವಾಗ ಅಥವಾ ಬೇರೆ ಪ್ರಮಾಣದ ವಿರೋಧ ಬಂದಾಗ ಮಾತ್ರ ಪರೀಕ್ಷೆ ಬೇಕು. ಅನಂತರ ಸಾಕ್ಷಿ ಯಥಾರ್ಥತೆಯನ್ನೊ, ಅಯಥಾರ್ಥತೆ ಯನ್ನೊ ಗ್ರಹಿಸುತ್ತದೆ. ಯಾವ ಪ್ರತಿಬಂಧವೂ ಇಲ್ಲದಾಗ ತನ್ನ ಸ್ವಭಾವದಿಂದಲೆ ಸಾಕ್ಷಿ ಯಥಾರ್ಥತೆಯನ್ನು ಗ್ರಹಿಸುತ್ತದೆ. ಆದ್ದರಿಂದ ಪ್ರಾಮಾಣ್ಯವು ಸ್ವಯಂ ವೇದ್ಯ.

ನವ್ಯನ್ಯಾಯ ಪಿತಾಮಹನೆನಿಸಿದ ಗಂಗೇಶೋಪಾಧ್ಯಾಯನು ತತ್ವ ಚಿಂತಾಮಣಿ ಎಂಬ ಗ್ರಂಥದಲ್ಲಿ ಪ್ರಾಮಾಣ್ಯವು ಸ್ವಯಂ ವೇದ್ಯವಲ್ಲವೆಂದು ಪ್ರತಿಪಾದಿಸಿದ್ದಾನೆ. ಅವನ ಈ ಗ್ರಂಥವು ತತ್ವಶಾಸ್ತ್ರ ಪ್ರಪಂಚದಲ್ಲಿಯೇ ಅನ್ಯಾದೃಶವೆಂದು ಪ್ರಸಿದ್ಧ ವಾಗಿದೆ. ಸುಮಾರು ಮುನ್ನೂರು ಪುಟಗಳಷ್ಟಾಗಬಹುದಾದ ಈ ಗ್ರಂಥಕ್ಕೆ ಹತ್ತು ಲಕ್ಷ ಪುಟಗಳನ್ನು ಮೀರಿಸುವಷ್ಟು ವಿಪುಲವಾದ ಟೀಕಾ ಟಿಪ್ಪಣಿಗಳು ಪರಿಷ್ಕಾ ರಗಳು ಬೆಳೆದಿವೆ. ಶ್ರೀವ್ಯಾಸರಾಯರ ಕಾಲದಲ್ಲಿ 'ಜಯದೇವ ಜಗದ್ಗುರು' ಎಂದು ಮಾನ್ಯನಾಗಿದ್ದ ಪಕ್ಷಧರ ಮಿಶ್ರನು ತಾರ್ಕಿಕರಲ್ಲಿ ಅತ್ಯಂತ ಪ್ರಸಿದ್ಧನಾಗಿದ್ದ. ಮಣಿಗೆ ಆಲೋಕವೆಂಬ ಟೀಕೆಯನ್ನು ಬರೆದಿದ್ದ. 'ಪಕ್ಷಧರ ವಿಪಕ್ಷ' ರೆಂದು ಪಸಿದ್ಧರಾದ ವ್ಯಾಸರಾಯರು ಮಣಿಯನ್ನೂ ಆಲೋಕವನ್ನೂ ಯಜ್ಞಪತಿ ಮುಂತಾದವರ ಮತ ಗಳನ್ನೂ ವಿವೇಚಿಸಿ ತಮ್ಮ ತರ್ಕಶುದ್ಧವಾದ ವಿಚಾರದ ತಾಂಡವ ನೃತ್ಯದಿಂದ ವಿದ್ವಾಂ ಸರಿಗೆ ಹಬ್ಬ ಉಂಟುಮಾಡಿದ್ದಾರೆ, ತರ್ಕತಾಂಡವ ಗ್ರಂಥದಲ್ಲಿ.

'ಪ್ರಾಮಾಣ್ಯವು ಸ್ವಯಂ ವೇದ್ಯ' ಎಂದರೇನೆಂಬುದನ್ನು ಹೇಳುವುದರಲ್ಲಿಯೆ ಮಣಿಗ್ರಂಥ ಸೋತಿದೆ. 'ಜ್ಞಾನದ ಅನುಭವವು ಜ್ಞಾನವನ್ನು ಅಯಥಾರ್ಥವೆಂದು ಗ್ರಹಿಸದಿದ್ದಲ್ಲಿ ಯಥಾರ್ಥವೆಂದೇ ಗ್ರಹಿಸುತ್ತದೆ ಎಂಬುದು ಪ್ರಾಮಾಣ್ಯವು ಸ್ವಯಂ

ವೇದ್ಯ ಎಂಬುದರ ಅರ್ಥವಂತೆ ! ವ್ಯಾಸರಾಜರು ಹೇಳುತ್ತಾರೆ— 'ಘಟಜ್ಞಾನ' ಎಂಬ ಶಬ್ದದಿಂದ ಬರುವ ಜ್ಞಾನದ ಪ್ರಾಮಾಣ್ಯವನ್ನು ಆ ಜ್ಞಾನದ ಅನುಭವವು ಗ್ರಹಿಸುವುದಿಲ್ಲ. ಯಜ್ಞಪತಿಯ ಪರಿಷ್ಕಾರ ಹೀಗಿದೆ— 'ಘಟಜ್ಞಾನ' ಎಂದು ತಿಳಿದರೆ ಸಾಲದು, 'ಎಲ್ಲಿ ಯಾವ ವಸ್ತುವಿದೆಯೊ ಅಲ್ಲಿ ಆ ವಸ್ತುವನ್ನು ಗ್ರಹಿಸುವ ಜ್ಞಾನ' ಎಂದು ಅನುಭವ ಬರಬೇಕು. ಅದು ಆ ಜ್ಞಾನವು ಯಥಾರ್ಥವಲ್ಲವೆಂದು ಗ್ರಹಿಸಿರಬಾರದು. ಆಗ ಆ ಜ್ಞಾನದ ಪ್ರಾಮಾಣ್ಯವೆ ಆ ಅನುಭವದಲ್ಲಿಯೇ ವೇದ್ಯ ವಾಗುವುದು.' ಈ ಪರಿಷ್ಕಾರವೂ ಸರಿಯಲ್ಲ. ಎಲ್ಲಿ ಯಾವ ವಸ್ತುವಿದೆಯೊ ಅಲ್ಲಿಯೇ ಆ ವಸ್ತುವನ್ನು ಗ್ರಹಿಸುವುದೆಂಬುದೆ ಪ್ರಾಮಾಣ್ಯ ತಾನೆ ? ಪ್ರಾಮಾಣ್ಯ ವನ್ನು ಗ್ರಹಿಸುವ ಅನುಭವವು ಪ್ರಾಮಾಣ್ಯವನ್ನು ಗ್ರಹಿಸುತ್ತದೆ ಎಂದಾಯಿತು ! ಈ ಅನುಭವವು ಜ್ಞಾನವನ್ನು ಯಥಾರ್ಥವಲ್ಲವೆಂದು ಗ್ರಹಿಸಿರಬಾರದಂತೆ ! ಯಥಾ ರ್ಥವೆಂದು ಗ್ರಹಿಸುವ ಅನುಭವವೆ ಯಥಾರ್ಥವಲ್ಲವೆಂದು ಗ್ರಹಿಸುವುದುಂಟೆ ?

ಪಕ್ಷಧರಮಿಶ್ರನ ಪರಿಷ್ಕಾರವೆ ಬೇರೆ— ಅನುಭವಕ್ಕೆ ಜ್ಞಾನವನ್ನು ಗ್ರಹಿಸಲು ಯಾವ ಸಾಮಗ್ರಿ ಬೇಕೋ, ಅದೇ ಸಾಮಗ್ರಿಯಿಂದ ಆ ಜ್ಞಾನದ ವಿಷಯ ವನ್ನೂ ಗ್ರಹಿಸುತ್ತಿರಬೇಕು, ಆ ಜ್ಞಾನವು ಯಥಾರ್ಥವಲ್ಲವೆಂದು ಗ್ರಹಿಸುತ್ತಿರ ಬಾರದು, ಅಂಥ ಅನುಭವವು ಆ ಜ್ಞಾನದ ಪ್ರಾಮಾಣ್ಯವನ್ನು ಅವಶ್ಯಗ್ರಹಿಸುತ್ತದೆ. 'ಘಟಜ್ಞಾನ' ಎಂಬ ಅನುಭವದಲ್ಲಿ ಜ್ಞಾನವು ಜ್ಞಾನ ಶಬ್ದದಿಂದಲೂ, ಘಟವು ಘಟ ಶಬ್ದದಿಂದಲೂ ಗೋಚರವೆನಿಸಿದೆ. ಸಾಮಗ್ರಿ ಬೇರೆ ಬೇರೆ. ಆದ್ದರಿಂದ ಪ್ರಾಮಾಣ್ಯವು ಗೋಚರಿಸದಿದ್ದರೆ ಬಾಧಕವಿಲ್ಲ.

ವ್ಯಾಸರಾಜರು ಹೇಳುತ್ತಾರೆ— ಘಟಜ್ಞಾನವನ್ನೇ 'ಅದು' 'ಇದು' ಎಂದು ಸರ್ವನಾಮಶಬ್ದದಿಂದ ಹೇಳಿದಾಗ ಒಂದೆ ಶಬ್ದವು ಜ್ಞಾನವನ್ನೂ ಅದರ ವಿಷಯ ವನ್ನು ತಿಳಿಸುತ್ತದೆ. ಆ ಜ್ಞಾನದ ಪ್ರಾಮಾಣ್ಯವು ಅನುಭವದಲ್ಲಿ ಗೋಚರಿಸ ಬೇಕಾ ಗಿತ್ತು. ಸರ್ವನಾಮ ಶಬ್ದವನ್ನು ಹೊರತು ಬೇರೆ ಸಾಮಗ್ರಿಯನ್ನು ವಿವಕ್ಷೆ ಮಾಡಿ ದರೆ 'ಜ್ಞಾನ' ಎಂಬ ಶಬ್ದಕ್ಕೆ ಘಟಜ್ಞಾನವೆಂದು ಅರ್ಥಭ್ರಮವಿದ್ದಾಗ ಒಂದೆ ಸಾಮ ಗ್ರಿಯಿಂದ ಜ್ಞಾನ ವಿಷಯಗಳೆರಡೂ ಅನುಭವದಲ್ಲಿ ಗೋಚರವಾಗಬಹುದು. ಭ್ರಮೆ ಇರಕೂಡದೆಂದೂ ವಿವಕ್ಷೆ ಮಾಡಿದರೆ 'ಜ್ಞಾನವು ಯಥಾರ್ಥವಲ್ಲ' ವೆಂದು ಗ್ರಹಿಸು ತ್ತಿರಬಾರದೆಂಬ ಅಂಶ ವ್ಯರ್ಥ. ಯಥಾರ್ಥವನ್ನು ಯಥಾರ್ಥವಲ್ಲವೆಂದು ಗ್ರಹಿಸಿ ದರೆ ಅದು ಭ್ರಮೆಯೇ ತಾನೆ ? ಹೀಗೆ ಪ್ರಾಮಾಣ್ಯವು ಸ್ವಯಂ ವೇದ್ಯವೆಂದರೇ ನೆಂಬುದೆ ತಾರ್ಕಿಕರಿಗೆ ವೇದ್ಯವಾಗಿಲ್ಲ !

ಸ್ವಯಂ ವೇದ್ಯವೆನ್ನಲು ಏನು ಆಧಾರವೆಂಬುದು ಮುಂದಿನ ಪ್ರಶ್ನೆ. ಸ್ವಯಂ ವೇದ್ಯವಲ್ಲವೆನ್ನುವುದು ಅಪಶ್ಯವಾದ್ದರಿಂದ ಎಂದು ಉತ್ತರ. ಏಕೆಂದರೆ ಸುಖಾನು ಭವದಂಥ ಕೆಲವು ಜ್ಞಾನ ಬಂದಾಗ ಅವು ಯಥಾರ್ಥವೆ ಅಲ್ಲವೆ ಎಂಬ ಸಂಶಯ

ಏಕಿಲ್ಲ ? ಅವನ್ನು ಪರೀಕ್ಷಿಸಿ ಯಥಾರ್ಥವೆಂದು ತಿಳಿಯುವುದು ಅನುಭವ ವಿರುದ್ಧ. ಸಂದಿಗ್ಧ ವಿಷಯಗಳಲ್ಲಿಯೂ ಜ್ಞಾನವನ್ನು ಪರೀಕ್ಷಿಸಿದ ಮೇಲೆ ಆ ಪರೀಕ್ಷೆ ಸರಿಯೇ ತಪ್ಪೆ ಎಂದು ಇನ್ನೊಂದು ಪರೀಕ್ಷೆ ಏಕೆ ಮಾಡುವುದಿಲ್ಲ ? ಇಲ್ಲಿ ಎಲ್ಲ ಕಡೆ ಪ್ರಾಮಾಣ್ಯ ಸ್ವಯಂ ವೇದ್ಯವಾದ್ದರಿಂದಲೆ ಸಂಶಯವಿಲ್ಲ ಎನ್ನಬೇಕು.

ಸುಖಾನುಭವದಂಥ ಜ್ಞಾನದಲ್ಲಿ ಪ್ರಾಮಾಣ್ಯ ಸ್ವಯಂ ವೇದ್ಯವೆನಿಸುವುದನ್ನು ತಪ್ಪಿಸಲು ಮಣಿ ಹೀಗೆ ಹೇಳುತ್ತದೆ— 'ಪ್ರಾಮಾಣ್ಯವೆಂದರೆ ಎಲ್ಲಿ ಯಾವುದಿದೆಯೊ ಅಲ್ಲಿಯೆ ಅದನ್ನು ಗ್ರಹಿಸುವುದೊಂದು ಬಗೆ, ಎಲ್ಲಿ ಯಾವುದು ಇಲ್ಲವೊ ಅಲ್ಲಿ ಅದನ್ನು ಗ್ರಹಿಸದಿರುವುದು ಇನ್ನೊಂದು ಬಗೆ. ಎರಡನೆಯ ಬಗೆಯ ಪ್ರಾಮಾಣ್ಯವು ಸಾಕ್ಷ್ಯನುಭವದಲ್ಲಿ ಗೋಚರಿಸಲಾರದು.' ವ್ಯಾಸರಾಜರು ಹೇಳುತ್ತಾರೆ—ಪ್ರವೃತ್ತಿ ಉಂಟಾಗಲು ಮೊದಲನೆ ಬಗೆಯ ಪ್ರಾಮಾಣ್ಯವೆ ಬೇಕು. ಅದು ಸ್ವಯಂ ವೇದ್ಯ ವೆಂದೊಪ್ಪಿದರೆ ವಿವಾದವೆಲ್ಲಿ ? ಎರಡನೆ ಬಗೆಯದು ಪ್ರವೃತ್ತಿಗೆ ಅನುಪಯುಕ್ತ. 'ಅದು ಸ್ವಯಂ ವೇದ್ಯವೇ ಅಲ್ಲವೆ' ಎಂಬ ವಿವಾದವೆ ಎದ್ದಿಲ್ಲ. ಅದನ್ನಿಟ್ಟುಕೊಂಡು ಸ್ವಯಂ ವೇದ್ಯವಲ್ಲವೆಂದು ವಾದಿಸುವುದು ಅರ್ಥ ಶೂನ್ಯ.

ಪ್ರಾಮಾಣ್ಯವು ಕೇವಲ ವಿಚಾರ ವೇದ್ಯವೆನ್ನುವುದಾದರೆ ಆ ವಿಚಾರವೂ ಸರಿಯೆ ತಪ್ಪೆ ಎಂದು ನಿರ್ಧರಿಸಲು ಇನ್ನೊಂದು ವಿಚಾರ, ಅದಕ್ಕೆ ಇನ್ನೊಂದು ವಿಚಾರವೆಂದು ಪರ್ಯವಸಾನವಿಲ್ಲದಂತಾಗಿ ಪ್ರಾಮಾಣ್ಯವು ವೇದ್ಯವೇ ಆಗಲಾರದು. 'ಸಂಶಯಕ್ಕೆ ಎಡೆಯಿದ್ದಲ್ಲಿ ವಿಚಾರ, ಇಲ್ಲದಿದ್ದಲ್ಲಿ ಪ್ರಾಮಾಣ್ಯವು ಸ್ವಯಂ ವೇದ್ಯ' ಎಂದರೆ ಅದು ನಮ್ಮ ಸಿದ್ಧಾಂತ.

ಮಣಿಗ್ರಂಥವು ಹೇಳುತ್ತದೆ— 'ಎಲ್ಲ ಜ್ಞಾನಗಳ ಪ್ರಾಮಾಣ್ಯವನ್ನು ಅರಿಯ ಬೇಕೆಂಬ ನಿಯಮವಿಲ್ಲ. ಆದ್ದರಿಂದ ವಿಚಾರದ ಮೇಲೆ ವಿಚಾರಗಳೆಂದು ಪರ್ಯವ ಸಾನವಾಗದಿರುವ ಭಯಕ್ಕೆ ಅವಕಾಶವಿಲ್ಲ. ಜ್ಞಾನದ ಪ್ರಾಮಾಣ್ಯವನ್ನು ಅರಿಯು ದಿದ್ದರೂ ಜ್ಞಾನದ ಬಲದಿಂದಲೆ ಪ್ರವೃತ್ತಿ ಕೊಡಬಹುದು; ವ್ಯಾಸರಾಜರು ಕೇಳು ತ್ತಾರೆ—'ಹಾಗಾದರೆ ಪಿತ್ತದೋಷದಿಂದ ಶಂಖವು ಹಳದಿಯಾಗಿ ಕಂಡಾಗಲೂ ಆ ಜ್ಞಾನದಿಂದ ಪ್ರವೃತ್ತಿ ಉಂಟಾಗುತ್ತದೆಯೆ ? 'ಅದೊಂದು ಭ್ರಮೆ' ಎಂಬ ಅರಿವು ಪ್ರತಿಬಂಧಕವೆನ್ನುವುದಾದರೆ 'ಇದು ಅಯಥಾರ್ಥ' ವೆಂಬ ಅರಿವು ಇಲ್ಲದಿರುವುದು ಪ್ರವೃತ್ತಿಗೆ ಕಾರಣವೆಂದಂತಾಗುತ್ತದೆ. ಅದಕ್ಕಿಂತ 'ಇದು ಯಥಾರ್ಥ' ಎಂಬ ಅರಿವು ಕಾರಣವೆನ್ನುವುದು ಸೂಕ್ತವಾಗಲಾರದೆ ? ಇಲ್ಲದಿದ್ದರೆ ಪ್ರವೃತ್ತಿಗೆ ಯಾವ ಜ್ಞಾನವೂ ಕಾರಣವಲ್ಲ, ಅಜ್ಞಾನದ ಅಭಾವವೆ ಕಾರಣ ಎನ್ನಬೇಕಾದೀತು.

ವಿಚಾರದಿಂದಲೆ ಪ್ರಾಮಾಣ್ಯ ನಿಶ್ಚಯವೆನ್ನುವ ತಾರ್ಕಿಕರು ಮೊತ್ತ ಮೊದಲಿಗೆ ಪ್ರಾಮಾಣ್ಯವೆಂದರೇನೆಂಬ ಕಲ್ಪನೆಯಾದರೂ ಒಬ್ಬನಿಗೆ ಹೇಗೆ ಬರುತ್ತದೆ ಎಂಬು

ದನ್ನು ಹೇಳಬಲ್ಲರೆ ? ಪೂರ್ವಜನ್ಮ ಸಂಸ್ಕಾರದಿಂದ ಎನ್ನುವುದು ಕ್ಲಿಷ್ಟ ಕಲ್ಪನೆ. ಮಣಿಕಾರರು ಮೊದಲ ಬಾರಿಗೆ ಅಯಥಾರ್ಥತೆಯ ಅಭಾವವೆ ವಿಚಾರದಿಂದ ಸಿದ್ಧವಾಗುತ್ತದೆ ಎಂದಿದ್ದಾರೆ. ಇದಕ್ಕೂ ನಮ್ಮ ಪ್ರಶ್ನೆಗೂ ಏನು ಸಂಬಂಧ ? ಅಯಥಾರ್ಥತೆ ಎಂದರೇನೆಂಬ ಕಲ್ಪನೆಯಾದರೂ ಮೊದಲ ಬಾರಿಗೆ ಹೇಗೆ ಬರುತ್ತದೆ ? ಯಥಾರ್ಥತೆಯು ಇಚ್ಛಾದಿಗಳಲ್ಲಿ ಅನುಭವಸಿದ್ಧವಾಗಿದ್ದು ಜ್ಞಾನದಲ್ಲಿ ವಿಚಾರವೇದ್ಯವಾಗುತ್ತದೆ ಎಂದೂ ತಾರ್ಕಿಕರು ಹೇಳುವುದುಂಟು. ಆದರೆ ಜ್ಞಾನದಲ್ಲಿಯೂ ಅದು ಏಕೆ ಅನುಭವ ವೇದ್ಯವಾಗಲಾರದು ?

ಹೀಗೆ ವ್ಯಾಸರಾಜರು ಬ್ರಹ್ಮತರ್ಕದ ಬಲದಿಂದ ಗೌತಮಕಣಾದರ ತರ್ಕದ ತಲೆಯ ಮೇಲೆ ತಾಂಡವವಾಡಿ ಆ ತಲೆಯನ್ನಲಂಕರಿಸಿದ್ದ 'ಮಣಿ' ಯನ್ನು ಕೆಡವಿದ್ದಾರೆ ಎನ್ನಬಹುದು.

---

### ನೇಹನಾನಾಸ್ತಿ ಕಿಂಚನ

ಈ ಉಪನಿಷದ್ವಾಕ್ಯ ಪ್ರಪಂಚ ಅಸತ್ಯವೆಂದು ಹೇಳುತ್ತಿದೆ ಎಂದಿದೆ ಶಾಂಕರಭಾಷ್ಯ. ವ್ಯಾಸತೀರ್ಥರು ಇದಕ್ಕೆ ಹೀಗೆ ಅರ್ಥೈಸುತ್ತಾರೆ–ಇಲ್ಲಿ 'ನಾನಾ' ಶಬ್ದಕ್ಕೆ 'ವಿನಾ' ಅಂದರೆ ಹೊರತಾಗಿ ಎಂದರ್ಥ 'ಹಿರುಕ್ ನಾನಾ ಚ ವರ್ಜನೇ' ಎಂದು ಕೋಶ ಈ ಅರ್ಥ ಹೇಳುತ್ತದೆ. 'ನಾನಾ ವಿಷ್ಣುಂ ಮೋಕ್ಷದೋ ನಾಸ್ತಿ ದೇವಃ ಎಂದು ಮಹಾಭಾರತ ಇದೇ ಅರ್ಥದಲ್ಲಿ 'ನಾನಾ' ಶಬ್ದವನ್ನು ಪ್ರಯೋಗಿಸಿದೆ ಆದ್ದರಿಂದ ಇಹ ಅಂದರೆ ಈ ಪ್ರಪಂಚದಲ್ಲಿ ನಾನಾ = ಬ್ರಹ್ಮನನ್ನು ಹೊರತಾಗಿ ಕಿಂಚನ = ಯಾವ ವಸ್ತುವೂ ನಾಸ್ತಿ = ಇಲ್ಲ. ಅಂದರೆ ಎಲ್ಲಾ ವಸ್ತುಗಳೂ ಬ್ರಹ್ಮನಿಂದ ವ್ಯಾಪಿಸಿಕೊಂಡೇ ಇದೆ. ಅವನನ್ನು ಬಿಟ್ಟು ಇಲ್ಲ. ಹೀಗೆ ಈ ವಾಕ್ಯ ಬ್ರಹ್ಮನಿಗೆ ಜಗದ್ವ್ಯಾಪ್ತಿಯನ್ನು ಹೇಳುತ್ತದೆ.

ನ್ಯಾಯಾಮೃತ.

---

ooo

ತರ್ಕತಾಂಡವದಲ್ಲಿ

# ತರ್ಕಕ್ಕೆ ಪ್ರತಿತರ್ಕ

ಎ. ಹರಿದಾಸ ಭಟ್ಟ, ಎಂ. ಎ., ವಿದ್ವಾನ್.

**ಸಂಧ್ಯಾವಂದನೆ ಮಾಡದೇ ಹೋದರೆ ಪಾಪವಿದೆ :** ಬ್ರಹ್ಮಹತ್ಯೆ ಕ್ಷಣದಲ್ಲಿ ನಡೆಯುವ ಕ್ರಿಯೆ. ಅದರ ಫಲವಾದ ನರಕ ಎಂದೋ ಆಗುವುದು. ಅದಕ್ಕಾಗಿ ಬ್ರಹ್ಮಹತ್ಯೆಯಿಂದ ಪಾಪ ಹುಟ್ಟುತ್ತದೆ ಎನ್ನಬೇಕಾಗುತ್ತದೆ. ಆದರೆ ಪ್ರತಿನಿತ್ಯ ಮಾಡಬೇಕಾದ ಸಂಧ್ಯಾವಂದನೆಯನ್ನು ಒಂದು ದಿನ ಮಾಡದೇ ಹೋದರೆ ಅದರಿಂದ ಪಾಪವುಂಟಾಗಬೇಕಾಗಿಲ್ಲ. ಸಂಧ್ಯಾ ಅಕರಣವೇ ಸಾಕ್ಷಾತ್ ಅನರ್ಥಕಾರಣ. ಅಕರಣವು ಅಭಾವವಾದ್ದರಿಂದ ಸರ್ವದಾ ಇದೆ. ಅದರಿಂದ ಅಲ್ಲಿ ಪಾಪವನ್ನು ಒಪ್ಪುವುದು ಬೇಡ-ಇದು ತಾರ್ಕಿಕ ಸಿದ್ಧಾಂತ.

ಹಾಗಾದರೆ ಪ್ರಾಯಶ್ಚಿತ್ತದ ಆವಶ್ಯಕತೆ ಏನು ? ಪಾಪವೇ ಇಲ್ಲವೆಂದ ಮೇಲೆ ಪ್ರಾಯಶ್ಚಿತ್ತದಿಂದ ಪಾಪಕ್ಷಯವಾಗುತ್ತದೆ ಎನ್ನುವಂತಿಲ್ಲ ! ಹೀಗಾಗಿ ಸಂಧ್ಯಾ ಅಕರಣಕ್ಕೆ ಪ್ರಾಯಶ್ಚಿತ್ತ ಮಾಡಿಕೊಂಡರೂ ಸಂಧ್ಯಾ ಅಕರಣ ರೂಪ ಕಾರಣವಿರುವುದರಿಂದ ಅನರ್ಥ ಅನಿವಾರ್ಯವಾದೀತು, ಆದ್ದರಿಂದ ಸಂಧ್ಯಾವಂದನೆ ಮಾಡದಿದ್ದರೆ ಪಾಪವಿದೆ. ಇದು ವ್ಯಾಸತೀರ್ಥರ ಸಮರ್ಥನೆ.

2. **ಜಾತಿಬೇಕಿಲ್ಲ ;** ಅನೇಕ ಮನುಷ್ಯರಲ್ಲಿ "ಮನುಷ್ಯ" ಎಂಬ ಒಂದೇ ಶಬ್ದವನ್ನು ಪ್ರಯೋಗಿಸಬೇಕಾದರೆ ಮನುಷ್ಯರೆಲ್ಲರಲ್ಲೂ ಮನುಷ್ಯತ್ವವೆಂಬ ಒಂದೇ ಧರ್ಮವಿರಬೇಕು. ಅದು ಜಾತಿ. ಎನ್ನುತ್ತದೆ ನ್ಯಾಯದರ್ಶನ.

ಆದರೆ ಅಭಿಧೇಯತ್ವ, ಪ್ರಮೇಯತ್ವ ಮೊದಲಾದವು ಜಾತಿಯಲ್ಲವಾದರೂ ಅಭಿಧೇಯ, ಪ್ರಮೇಯವೆಂಬ ವ್ಯವಹಾರ ಅನೇಕ ವಸ್ತುಗಳಲ್ಲಿ ನಡೆಯುತ್ತದೆ. ಇದನ್ನು ನ್ಯಾಯದರ್ಶನವೂ ಒಪ್ಪಿಕೊಂಡಿದೆ. ಅಂತೆಯೇ "ಘಟತ್ವ" ಎಂಬ ಧರ್ಮವು ಬಂಗಾರದ ಕೊಡದಲ್ಲಿಯೂ ಮಣ್ಣಿನ ಕೊಡದಲ್ಲೂ ಒಂದೇ ಆದರೆ ತಾರ್ಕಿಕರು ಜಾತಿಗೆ ಬಾಧಕವಾಗಿ ಹೇಳುವ ಸಾಂಕರ್ಯ ದೋಷವಿದೆ. ಆದ್ದರಿಂದ ಅವೆರಡರಲ್ಲಿರುವ ಆ

ಘಟತ್ವ ಧರ್ಮ ಒಂದೇ ಅಲ್ಲ. ಆದರೂ ಒಂದೇ ಶಬ್ದವನ್ನು ಎರಡರಲ್ಲೂ ಪ್ರಯೋಗಿಸುತ್ತೇವೆ ಆದರಾತೆ ಸಾಮ್ಯವಿರುವುದರಿಂದಲೇ ಅನೇಕ ವಸ್ತುಗಳಲ್ಲಿ ಒಂದೇ ಶಬ್ದ ಪ್ರಯೋಗ ಸಾಧ್ಯ ಎಂದು ಹೇಳಲು ಬರುವಾಗ ಈ ಜಾತಿಯೇಕೆ ?

3 **ಕತ್ತಲೂ ದ್ರವ್ಯ** . ದ್ರವ್ಯವು ಕಾಣಿಸಬೇಕಾದರೆ ಬೆಳಕು ಇರಬೇಕು. ಆದರೆ ಕತ್ತಲು ಬೆಳಕಿಲ್ಲದೆಯೇ, ಕಣ್ಣಿಗೆ ಕಾಣುತ್ತದೆ ಆದ್ದರಿಂದ ಅದು ದ್ರವ್ಯವಲ್ಲ ಅದು ಅಭಾವ. ಬೆಳಕಿಲ್ಲದಿರುವುದೇ ಕತ್ತಲು. ಇದು ನ್ಯಾಯಸಿದ್ಧಾಂತ. ವ್ಯಾಸತೀರ್ಥರು ಹೇಳುತ್ತಾರೆ—ನಮ್ಮ ಕಣ್ಣು ವಸ್ತುಗಳನ್ನು ಗ್ರಹಿಸಬೇಕಾದರೆ ಬೆಳಕು ಬೇಕು. ಆದರೆ ಬೆಕ್ಕಿನ ಕಣ್ಣು ಕತ್ತಲಲ್ಲೂ ಕಾಣುತ್ತದೆ. ಹಾಗಾದರೆ ಅದನ್ನು ಕಣ್ಣೇ ಅಲ್ಲ ಎನ್ನೋಣವೇ ? ಹೀಗೆ ಪದಾರ್ಥಗಳನ್ನು ಗ್ರಹಿಸುವ ಇಂದ್ರಿಯದಲ್ಲಿ ವ್ಯತ್ಯಾಸವಿರುವಂತೆ ವಸ್ತುಗಳಲ್ಲೂ ವ್ಯತ್ಯಾಸವಿರಬಾರದೇಕೆ ? ಆದ್ದರಿಂದ ಬೆಳಕಿಲ್ಲದೆ ಕಾಣಿಸಿಕೊಂಡರೂ ಕತ್ತಲು ದ್ರವ್ಯವೇ ಆಗಿದೆ.

**ಬಂಗಾರ ಬೆಂಕಿಯಲ್ಲಿ** : ಸುವರ್ಣ ತೇಜಸ್ಸು ಮತ್ತು ಪೃಥ್ವಿಯ ಅಂಶಗಳಿಂದ ಮಿಶ್ರಿತ ವಸ್ತು. ಪಾರ್ಥಿವದ್ರವಪದಾರ್ಥ ಬೆಂಕಿಯಲ್ಲಿ ಕಾಸಿದರೆಲ್ಲ ನಾಶ ಹೊಂದುತ್ತದೆ. ಉದಾಹರಣೆಗೆ ತುಪ್ಪ. ಆದರೆ ಬಂಗಾರವನ್ನು ಬೆಂಕಿಯಲ್ಲಿ ಎಷ್ಟು ಕಾಸಿದರೂ ಅದು ನಾಶ ಹೊಂದುವುದಿಲ್ಲ. ಆದ್ದರಿಂದ ಅದು ತೇಜೋಮಯ ಪದಾರ್ಥ. ' ಅಗ್ನೇಃ ಅಪತ್ಯಂ ಪ್ರಥಮಂ ಹಿರಣ್ಯಂ ' ಎಂಬ ಪುರಾಣವಾಕ್ಯವೂ ಸುವರ್ಣವು ಅಗ್ನಿಪುತ್ರನೆನ್ನುತ್ತಿದೆ. ಆದ್ದರಿಂದ ಸುವರ್ಣ ತೇಜಸ್ಸು—ಇದು ತಾರ್ಕಿಕರವಾದ.

ಒಂದೇ ಗುಂಪಿಗೆ ಸೇರಿದ ವಸ್ತುಗಳಲ್ಲೂ ಅಲ್ಪ ಸ್ವಲ್ಪ ವ್ಯತ್ಯಾಸ ಇದ್ದೇ ಇರುತ್ತದೆ.ಅಷ್ಟರಿಂದಲೇ ಆ ವಸ್ತುವನ್ನು ಅದು ಸೇರುವ ಗುಂಪಿನಿಂದ ಹೊರ ಹಾಕಬಾರದು. ಹಾಗೆ ಮಾಡುವುದಾದರೆ ಯಾವ ತೇಜಸ್ಸಲ್ಲೂ ದ್ರವರೂಪ ಕುಡಿಲ್ಲ. ಆದರೆ ಸುವರ್ಣ ದ್ರವ ರೂಪವಾಗಿದೆ. ಆದ್ದರಿಂದ ತೇಜಸ್ಸಲ್ಲ ಎಂದೂ ವಾದಿಸಬಹುದು. ಆದ್ದರಿಂದ ಬೆಂಕಿಯಲ್ಲಿ ಸುವರ್ಣದ ದ್ರವತ್ವವು ನಾಶಹೊಂದಿಲ್ಲ ಎಂಬ ಕಾರಣಕ್ಕಾಗಿ ಅದನ್ನು ಪಾರ್ಥಿವ ವಸ್ತುಗಳ ಗುಂಪಿನಿಂದ ಬೇರ್ಪಡಿಸಬೇಕಿಲ್ಲ. ಅಗ್ನಿಪುತ್ರ ಹಿರಣ್ಯವೆಂದಂತೆ 'ಅಗ್ನೇಃ ಆಪಃ' ಎಂಬ ಶ್ರುತಿ ಅಗ್ನಿಯಿಂದ ನೀರು ಎನ್ನುತ್ತದೆ. ಹಾಗಾದರೆ ನೀರೂ ತೇಜೋರೂಪವಾದೀತೇ ? ಈ ಶ್ರುತಿ ನೀರಿಗೆ ನಿಮಿತ್ತ ಬೆಂಕಿಯೆನ್ನುವುದಾದರೆ ಆ ಶ್ರುತಿಗೂ ಅದೇ ಅರ್ಥವಾಗಬಾರದೇಕೆ ?

5. **ವೇದ ಅಪೌರುಷೇಯ** : " ಅಹಮೇವ ಸ್ವಯಂ ಇದಂ ವದಾಮಿ " ಎಂಬ ವೇದವಾಕ್ಯ ' ಅಹಂ ' ಪದವನ್ನು ಪ್ರಯೋಗಿಸುತ್ತಿದೆ. ಅಹಂ ಎಂದರೆ ನಾನು. ವೇದವು ಅಪೌರುಷೇಯವಾದರೆ ಈ ನಾನು ಯಾರು ? ಆದ್ದರಿಂದ ವೇದ ಪೌರುಷೇಯ. ಎಂಬುದು ತಾರ್ಕಿಕರ ಯುಕ್ತಿ.

ತಾರ್ಕಿಕರು ವೇದ ಈಶ್ವರಕೃತವೆನ್ನುತ್ತಾರೆ. ಹಾಗಾದರೆ 'ಗೃಭ್ಣಾಮಿ ತೇ ಸೌಭಗತ್ವಾಯ ಹಸ್ತಂ" ಎಂಬ ವೇದವಾಕ್ಯ 'ನಿನ್ನ (ಹೆಣ್ಣಿನ) ಸೌಭಾಗ್ಯಕ್ಕಾಗಿ ನಿನ್ನ ಕೈ ಹಿಡಿಯುತ್ತೇನೆ' ಎನ್ನುತ್ತಿದೆ. ಇಲ್ಲಿ ಹೆಣ್ಣಿನ ಕೈ ಹಿಡಿಯುವವರು ಯಾರು ? ವೇದವಾಕ್ಯವನ್ನು ಹೇಳಿದ ಈಶ್ವರನೇ ? ಇಲ್ಲ. ಮದುವೆಯ ಗಂಡು. ವೇದವಾಕ್ಯ ಈಶ್ವರ ಕೃತವಾದರೂ ವ್ಯಕ್ತಿ ತನ್ನ ಅಭಿಪ್ರಾಯವನ್ನೂ ಸೇರಿಸಿ ಆ ವಾಕ್ಯವನ್ನು ಉಚ್ಚರಿಸ ಬಹುದೆನ್ನುವುದಾದರೆ ಈ ಉತ್ತರ ಅಪೌರುಷೇಯ ವೇದ ಎಂದಾಗಲೂ ಹೇಳಲು ಬಾರದೇನು ?

6. **ಅನ್ವಿತೇ ಶಕ್ತಿ :** 'ತಂದೆ' ಎಂದಾಗ 'ಯಾರ' ಎಂಬ ಪ್ರಶ್ನೆ ಜೊತೆಯಲ್ಲೆ ಬರುವುದು. ಆದ್ದರಿಂದ ಶಬ್ದಗಳಿಗೆ ಕೇವಲ ವಸ್ತುಗಳು ಮಾತ್ರ ಅರ್ಥವಲ್ಲ. ಇನ್ನೊಂದು ವಸ್ತುವಿನ ಸಂಬಂಧವೂ ಅರ್ಥ. ಎಂದು ದ್ವೈತಸಿದ್ಧಾಂತ.

ಇಲ್ಲಿ ತಾರ್ಕಿಕರ ಪ್ರಶ್ನೆ ಸಾಮಾನ್ಯತಃ ಇತರಾನ್ವಿತ ವಸ್ತುವಿನಲ್ಲಿ ಶಬ್ದಗಳಿಗೆ ಶಕ್ತಿ. ಇತರ ಯಾವುದು ಎಂದು ತಿಳಿಸಲು ಇನ್ನೊಂದು ಪದಸಮಭಿವ್ಯಾಹಾರ ಬೇಕು. ಹಾಗಾದರೆ ಶಬ್ದಗಳಿಗೆ ವಸ್ತು ಮಾತ್ರ ಅರ್ಥವೆಂದು ಹೇಳೋಣ ಅನ್ವಯ ವಿಶೇಷದಂತೆ ಅನ್ವಯ ಸಾಮಾನ್ಯವೂ ಪದಾಂತರ ಸಮಭಿವ್ಯಾಹಾರ ಲಭ್ಯವಾಗಲಿ.

ಇದಕ್ಕೆ ವ್ಯಾಸತೀರ್ಥರ ಪ್ರತಿತರ್ಕ-ನ್ಯಾಯದರ್ಶನ ಮನುಷ್ಯ ಶಬ್ದಕ್ಕೆ ಮನುಷ್ಯತ್ವ ಜಾತಿ ವಿಶಿಷ್ಟ ವ್ಯಕ್ತಿ ಅರ್ಥ ಎನ್ನುತ್ತದೆ. ಅದೇಕೆ. ಕೇವಲ ಜಾತಿ ಅರ್ಥ ಎನ್ನೋಣ ಪದಾಂತರ ಸಮಭಿವ್ಯಾಹಾರದಿಂದ ವ್ಯಕ್ತಿ ಲಾಭವಾಗಲಿ. ಆದ್ದರಿಂದ ಅನ್ವಯ ವಿಶಿಷ್ಟ ವಸ್ತುವಿನಲ್ಲೆ ಪದಗಳಿಗೆ ಶಕ್ತಿ. ಪದಾಂತರ ಸಮಭಿವ್ಯಾಹಾರದ ಸಹಕಾರ ದೊರೆತಾಗ ಆ ಅನ್ವಯ ವಿಶೇಷವನ್ನು ತಿಳಿಸುತ್ತದೆ.

7. **ಪ್ರವೃತ್ತಿಗೆ ಕಾರಣ ಯಾವುದು :** ಮನುಷ್ಯನು ಒಂದು ಕ್ರಿಯೆಯಲ್ಲಿ ತೊಡಗ ಬೇಕಾದರೆ ಅವನಿಗೆ ಆ ಕ್ರಿಯೆ ತನ್ನ ಇಷ್ಟಪ್ರಾಪ್ತಿಗೆ ಕಾರಣವಾಗಿದೆ ಎಂದಿಷ್ಟೆ ತಿಳಿದರೆ ಸಾಲದು. ವಿಷ ಮಿಶ್ರಿತ ಆಹಾರವೂ ತೃಪ್ತಿಗೆ ಕಾರಣವಾದ್ದರಿಂದ ಅದರ ಸೇವನೆಯನ್ನು ಮನುಷ್ಯ ಮಾಡಬೇಕಾಗಿತ್ತು, ಆದ್ದರಿಂದ ಯಾವ ಕ್ರಿಯೆ ಸುಖಕ್ಕಿಂತಲೂ ಹೆಚ್ಚಿನ ದುಃಖಕ್ಕೆ ಕಾರಣವಾಗದೆ ಸುಖಕ್ಕೆ ಕಾರಣವೆಂದು ತಿಳಿಯಲ್ಪಡುತ್ತದೋ ಆ ಕ್ರಿಯೆಯಲ್ಲಿ ಮನುಷ್ಯ ತೊಡಗುತ್ತಾನೆ. ವಿಷಮಿಶ್ರಿತ ಆಹಾರ ಸುಖಸಾಧನವಾದರೂ ಅದಕ್ಕಿಂತಲೂ ಹೆಚ್ಚಿನ ಮರಣ ರೂಪ ಅನರ್ಥಕ್ಕೆ ಕಾರಣವಾಗಿದೆ. ಆದ್ದರಿಂದ ಅದರ ಸೇವನೆಯಲ್ಲಿ ವ್ಯಕ್ತಿ ಪ್ರವೃತ್ತಿ ಮಾಡುವುದಿಲ್ಲ ಹೀಗೆ ಬಲವದನಿಷ್ಟಾನನುಬಂಧಿ ಇಷ್ಟಸಾಧನತ್ವಜ್ಞಾನ ಪ್ರವೃತ್ತಿ ಕಾರಣ ಎನ್ನುತ್ತಾರೆ ತಾರ್ಕಿಕರು.

ಕ್ರಿಯೆಯಿಂದ ಉಂಟಾಗುವ ಫಲದಲ್ಲಿ ಆಸೆಯಿರಬೇಕು. ಕ್ರಿಯೆ ಆ ಫಲಕ್ಕೆ ಕಾರಣ ಎಂಬ ಜ್ಞಾನವಿರಬೇಕು ಆಗ ವ್ಯಕ್ತಿ ಪ್ರವೃತ್ತಿ ಮಾಡುತ್ತಾನೆ. ವಿಷ

ಮಿಶ್ರಿತ ಆಹಾರ ಸೇವನೆಯಿಂದ ಹೊಟ್ಟೆ ತುಂಬಿದರೂ ಅದರಿಂದ ಬರುವ ಸಾವಿನಲ್ಲಿ ಅಧಿಕ ದ್ವೇಷವಿರುವುದರಿಂದ ಅದರಿಂದಾಗುವ ತೃಪ್ತಿಯಲ್ಲಿ ಆಸೆಯು, ನಮಗೆ ಉಂಟಾಗುವುದಿಲ್ಲ. ಸೋಮಾರಿಗೆ ಮುಂಜಾನೆ ಏಳುವುದು ತಾರ್ಕಿಕರು ಹೇಳುವಂತೆ ಅನಿಷ್ಟಕ್ಕಿಂತ ಹೆಚ್ಚಿನ ಇಷ್ಟಕ್ಕೆ ಸಾಧನವೆಂದು ತಿಳಿದಿದ್ದರೂ ಅವನು ಆ ಕ್ರಿಯೆಯಲ್ಲಿ ತೊಡಗುವುದಿಲ್ಲ. ನಿಷಿದ್ಧ ಕರ್ಮ ಜನ್ಯವಾದ ಪಾಪದಲ್ಲಿ ಉತ್ಕಟ ದ್ವೇಷವಿಲ್ಲದಿದ್ದರೆ ಅದರಿಂದಾಗುವ ಸುಖದಲ್ಲಿ ಉತ್ಕಟ ಬಯಕೆ ಇದ್ದಾಗ ಆ ಕ್ರಿಯೆ ಹೆಚ್ಚಿನ ಅನರ್ಥಕ್ಕೆ ಕಾರಣ ಎಂಬ ಪರಿಜ್ಞಾನವಿದ್ದರೂ ನಾವು ಆ ಕ್ರಿಯೆಯಲ್ಲಿ ಪ್ರವೃತ್ತಿ ಮಾಡುತ್ತೇವೆ. ಆದ್ದರಿಂದ ಕೇವಲ ಇಷ್ಟ ಸಾಧನತಾ ಜ್ಞಾನ ಮಾತ್ರ ಪ್ರವೃತ್ತಿಗೆ ಕಾರಣ ಆದರೆ ಅದರೊಂದಿಗೆ ಹಿಂದೆ ಹೇಳಿದ ಫಲೇಚ್ಛಾ ಇರಬೇಕು ಎಂದು ವ್ಯಾಸತೀರ್ಥರವಾದ.

8. **ಯೋಗ್ಯತಾ ಜ್ಞಾನ ಕಾರಣವಲ್ಲ :** ವಾಕ್ಯದಿಂದ ಜ್ಞಾನ ಬರಬೇಕಾದರೆ ವಾಕ್ಯ ಹೇಳಿರುವ ಅರ್ಥ ವಿರುದ್ಧವಾಗಿರಬಾರದು. 'ಇವನು ಬಂಜೆಯ ಮಗ' ಎಂಬ ವಾಕ್ಯ ಅಸಂಭಾವಿತವಾದ್ದನ್ನು ಹೇಳುತ್ತಿದೆಯಾದ್ದರಿಂದ ಆ ವಾಕ್ಯದಿಂದ ಜ್ಞಾನ ಬರುವುದಿಲ್ಲ. ಇದು ನ್ಯಾಯ ಸಿದ್ಧಾಂತ.

ಆದರೆ ಈ ನಿಯಮ ಅನುಸರಿಸಿದರೆ ಇಬ್ಬರಿಗೆ ನಡೆಯುವ ವಾದ ಕಿವುಡರ ಆಟವಾಗಬೇಕಾದೀತು. ಏಕೆಂದರೆ ಒಬ್ಬನು ಇನ್ನೊಬ್ಬನಿಗೆ ವಿರುದ್ಧವಾಗಿ ಹೇಳುತ್ತಿರುತ್ತಾನಾದ್ದರಿಂದ ಒಬ್ಬನ ವಾಕ್ಯದಿಂದ ಇನ್ನೊಬ್ಬನಿಗೆ ಜ್ಞಾನ ಬರುವುದಿಲ್ಲ. ಆದ್ದರಿಂದ ವಾಕ್ಯದ ಅರ್ಥವಿರುದ್ಧವಾಗಿದ್ದರೂ ಜ್ಞಾನ ಬರುವುದಕ್ಕೆ ತೊಂದರೆಯಿಲ್ಲ ಇದು ವ್ಯಾಸತೀರ್ಥರ ಪ್ರತಿವಾದ.

ಹೀಗೆ ಅನೇಕ ಕಡೆಗಳಲ್ಲಿ ತರ್ಕಕ್ಕೆ ಪ್ರತಿತರ್ಕ ಕೊಟ್ಟು ನ್ಯಾಯದರ್ಶನದ ವಿಮರ್ಶೆ ನಡೆಸಿದ್ದಾರೆ ವ್ಯಾಸತೀರ್ಥರು.

---

## ಮೂರ್ತಿತ್ರಯ ಸಾಮ್ಯ.

ಶ್ರೀವ್ಯಾಸರಾಜರು ಕರ್ನಾಟಕ ವಿದ್ಯಾ ಸಿಂಹಾಸನಾಧೀಶ್ವರರು. ಆದ್ದರಿಂದ ಇವರು ದೇವೇಂದ್ರನಂತೆ ತಮ್ಮ ಗ್ರಂಥಗಳೆಂಬ ವಜ್ರಾಯುಧದಿಂದ ಅದ್ವೈತ ವಿದ್ಯಾಚಲವನ್ನು ಭೇದಿಸಿದ್ದಾರೆಂದು ಶ್ರೀವಾದೀಂದ್ರರು ಬಣ್ಣಿಸಿದ್ದಾರೆ. ಇವರ ತರ್ಕತಾಂಡವ ರುದ್ರದೇವರ ತಾಂಡವದಂತೆ ಇವರ ಚಂದ್ರಿಕೆ ಚಂದ್ರನ ಚಂದ್ರಿಕೆಯಂತೆ ಹೀಗೆ ಈ ಮಹಾನುಬಾವರು ನೃಸಿಂಹ ದೇವರ ಮೂರು ಕಣ್ಣುಗಳಂತೆ ಇರುವ ತಮ್ಮ ಮೂರು ಉದ್ಗ್ರಂಥಗಳಿಂದ ಚಂದ್ರೇಂದ್ರರುದ್ರರನ್ನೂ ಹೋಲುತ್ತಾರೆ.

---

# ಮಂದಾರ ಮಂಜರೀ

—ಪಿ. ಯಸ್. ಶೇಷಗಿರಿರಾವ್

ಶ್ರೀವ್ಯಾಸರಾಜರು ಮಾಯಾವಾದ ಖಂಡನ ಟೀಕಾ, ಮಿಥ್ಯಾತ್ವಾನುಮಾನ ಖಂಡನ ಟೀಕಾ, ಉಪಾಧಿ ಖಂಡನ ಟೀಕಾ (ಇದಕ್ಕೆ ತತ್ತ್ವಪ್ರಕಾಶಿಕ ಎಂದೂ ಹೆಸರು) ಮತ್ತು ತತ್ತ್ವವಿವೇಕ ಟೀಕಾ-ಈ ನಾಲ್ಕು ಗ್ರಂಥಗಳಿಗೆ ತಾವು ರಚಿಸಿರುವ ವ್ಯಾಖ್ಯಾನಗಳಿಗೆ ಮಂದಾರ ಮಂಜರೀ ಎಂಬ ಒಂದೇ ಹೆಸರನ್ನು ಇಟ್ಟಿದ್ದಾರೆ. ಮಂದಾರ ಮಂಜರೀ ಎಂದರೆ ಮಂದಾರ ಪುಷ್ಪಗಳ ಗೊಂಚಲು ಎಂದರ್ಥ. ಈ ವ್ಯಾಖ್ಯಾನಗಳಲ್ಲಿ ತಾವು ಪ್ರತಿಪಾದಿಸಿರುವ ಬೇರೆ ಬೇರೆ ಅಂಶಗಳು ಬಿಡಿಯಾದ ಮಂದಾರ ಕುಸುಮಗಳು, ಸಮಗ್ರವಾದ ಗ್ರಂಥ ಅಂತಹ ಪುಷ್ಪಗಳ ಗೊಂಚಲು ಎಂದು ಅಭಿಪ್ರಾಯ. ಮಿಥ್ಯಾತ್ವಾನುಮಾನ ಖಂಡನ ಮಂ. ಮಂ. ಯ ಕೊನೆಯಲ್ಲಿ ವಿಷ್ಣುವನ್ನೇ ಮಂದಾರವೆಂದು ಕರೆದಿದ್ದಾರೆ.

ಅಭೀಷ್ಟ ಫಲದಾತಾರಂ ಶುಕಾದಿದ್ವಿಜಸೇವಿತಂ ।
ಭವಾಧ್ವಾಟನ ಖಿನ್ನೋಽಹಂ ವಿಷ್ಣುಮಂದಾರಮಾಶ್ರಯೇ ॥

ಈ ತಮ್ಮ ಕೃತಿಗಳಲ್ಲಿ ಶ್ರೀವ್ಯಾಸರಾಜರು ಅನೇಕ ಮುಖ್ಯ ವಿಷಯಗಳನ್ನು ಪ್ರತಿಪಾದಿಸಿದ್ದಾರೆ. ಇಲ್ಲಿಯ ಶೈಲಿ ನ್ಯಾಯಾಮೃತ ಮೊದಲಾದ ಅವರ ಪ್ರೌಢ ಗ್ರಂಥಗಳ ಶೈಲಿಯನ್ನೇ ಹೋಲುತ್ತದೆ. ಆದರೂ ಆಚಾರ್ಯರ ಈ ನಾಲ್ಕು ಕೃತಿಗಳು ಪ್ರಕರಣವೆಂದು ಕರೆಸಿಕೊಳ್ಳುವುದರಿಂದ ತಮ್ಮ ವ್ಯಾಖ್ಯಾನವೂ ಸಂಕ್ಷೇಪವಾಗಿರಬೇಕೆಂದು ಬಯಸಿದ್ದಾರೆ. ಹೇಗೂ ಉದ್ಗ್ರಂಥಗಳಲ್ಲಿ ಎಲ್ಲವನ್ನೂ ವಿಸ್ತಾರವಾಗಿ ನಿರೂಪಿಸುತ್ತೇವಷ್ಟೆ ಎಂಬ ಮಾತು ಅವರ ಈ ಕೃತಿಗಳ ಆರಂಭದಲ್ಲಿ ಸಾಮಾನ್ಯವಾಗಿ ಕಂಡುಬರುತ್ತದೆ.

ಸ್ಪಷ್ಟಾಗ್ಯೋಕ ಯಃ ಇಹ ಗ್ರಂಥಃ ನೇಹದವಾಕ್ರಿಯತೇ ಮಯಾ ।
ಗ್ರಂಥ ಗೌರವ ಭೀರುತ್ವಾತ್ ನಚೋದ್ಯಂಥಂ ಬಹೂಚ್ಯತೇ ॥

ಗ್ರಂಥದ ಕೊನೆಯಲ್ಲಿ ತಮ್ಮ ಗುರುಗಳನ್ನು ಸ್ಮರಿಸಿ ಗ್ರಂಥವನ್ನು ಸಮಾಪ್ತಿ ಮಾಡುತ್ತಾರೆ-

ಇತಿ ಶ್ರೀಮದ್ಬ್ರಹ್ಮಣ್ಯತೀರ್ಥ ಪೂಜ್ಯಪಾದಾನಾಂ ಶಿಷ್ಯೇಣ
ವ್ಯಾಸತೀರ್ಥಯತಿನಾ ವಿರಚಿತಾ...ಮಂದಾರಮಂಜರೀ ಸಂಪೂರ್ಣಾ

ತಮಗೆ ಸನ್ಯಾಸ ದೀಕ್ಷೆಯನ್ನು ಕೊಟ್ಟವರು ಶ್ರೀ ಬ್ರಹ್ಮಣ್ಯ ತೀರ್ಥರು. ಅವರಿಗೆ ಎಲ್ಲಾ ಗೌರವಗಳನ್ನು ಸಲ್ಲಿಸಿ ತಮ್ಮ ಹೆಸರಿನ ಹಿಂದೆ ಒಂದು ಶ್ರೀಕಾರವನ್ನೂ ಹಾಕದೆ ತಮ್ಮ ಘನತೆ, ಗುರುಭಕ್ತಿ ಮತ್ತು ನಿರಹಂಕಾರಗಳನ್ನು ತೋರಿಸಿ ಶ್ರೀಜಯತೀರ್ಥರು ತೋರಿಸಿಕೊಟ್ಟ ಇದೇ ಮಾರ್ಗದಲ್ಲಿ ನಡೆಯುತ್ತಾರೆ.

ಉ.ಖಂ.ಮಂ.ಮಂ. ಯಲ್ಲಿ ಮಾತ್ರ ಬಹಳ ಭಾವುಕತೆಯಿಂದ ಶ್ರೀ ಬ್ರಹ್ಮಣ್ಯತೀರ್ಥರನ್ನೂ ಮತ್ತು ತಮ್ಮ ವಿದ್ಯಾಗುರುಗಳಾದ ಶ್ರೀಲಕ್ಷ್ಮೀನಾರಾಯಣತೀರ್ಥ (ಶ್ರೀಪಾದರಾಜ) ರನ್ನೂ ಸ್ಮರಿಸುತ್ತಾರೆ. ಆ ವಾಕ್ಯದ ಭಾಷಾಂತರವನ್ನು ಕೊಡುವುದು ಬಹಳ ಸೂಕ್ತ-"ಎಲ್ಲಾ ದೇವತೆಗಳ ಕಿರೀಟದ ಮಣಿಗಳ ಪ್ರಭೆಯಿಂದ ಅರುಣವಾದ ಪಾದಾರವಿಂದವುಳ್ಳ, ಅರವಿಂದ ನಯನನಾದ, ಶ್ರೀಮುಖ್ಯಪ್ರಾಣದೇವರ ಹೃದಯಾರವಿಂದದಲ್ಲಿ ರಾಜಹಂಸನಂತಿರುವ, ಸಜ್ಜನರೆಂಬ ಕುಮುದಕ್ಕೆ ಚಂದ್ರನಾದ, ಲಕ್ಷ್ಮೀಪತಿಯಾದ ಶ್ರೀ ಹಯಗ್ರೀವನ ಸೇವಕರಾದ ಶ್ರೀಮತ್ಪರಮ ಹಂಸ ಪರಿವ್ರಾಜಕಾಚಾರ್ಯರಾದ ಶ್ರೀ ಬ್ರಹ್ಮಣ್ಯತೀರ್ಥ ಪೂಜ್ಯಪಾದರ ಶಿಷ್ಯನಾದ---ಶ್ರೀಲಕ್ಷ್ಮೀನಾರಾಯಣತೀರ್ಥರೆಂಬ ಯತಿಕುಲತಿಲಕರಿಂದ ಶ್ರೀ ಮಧ್ವಶಾಸ್ತ್ರವೆಂಬ ಅಮೃತವನ್ನು ಅಧ್ಯಯನ ಮಾಡಿದ ಶ್ರೀ ವ್ಯಾಸಯತಿಯಿಂದ ರಚಿಸಲ್ಪಟ್ಟ ಮಂದಾರ ಮಂಜರೀ ಎಂಬ ತತ್ತ್ವ ಪ್ರಕಾಶಿಕಾ ವ್ಯಾಖ್ಯಾ ಟಿಪ್ಪಣಿ ಸಮಾಪ್ತವಾಯಿತು."

ಆಚಾರ್ಯರ ಖಂಡನತ್ರಯ ಮತ್ತು ತತ್ತ್ವವಿವೇಕ ಗ್ರಂಥಗಳಿಗೆ ಶ್ರೀಪದ್ಮನಾಭತೀರ್ಥರ ಮತ್ತು ನರಹರಿತೀರ್ಥರ ವ್ಯಾಖ್ಯಾನಗಳಿವೆ ಎಂದು ಉಲ್ಲೇಖವಿದೆ. ಶ್ರೀಪದ್ಮನಾಭತೀರ್ಥರ ವ್ಯಾಖ್ಯೆ ಮುದ್ರಿತವೂ ಆಗಿದೆ. ಶ್ರೀನರಹರಿತೀರ್ಥರದು ಇನ್ನೂ ದೊರೆತಿಲ್ಲ. ಆದರೆ ಜಯತೀರ್ಥರ ಟೀಕೆಗಳು ಬಂದ ಮೇಲೆ ಪ್ರಾಚೀನ ಟೀಕೆಗಳು ಹಿಂದೆ ಬಿದ್ದಿವೆ.

ಜಯತೀರ್ಥರ ಈ ಟೀಕೆಗಳಿಗೆ ವ್ಯಾಖ್ಯಾನರೂಪವಾಗಿರುವ ಮಂದಾರಮಂಜರಿಗಳಲ್ಲಿ ಅನೇಕ ಗಹನವಾದ ಮತ್ತು ಅಪೂರ್ವವಾದ ವಿಮರ್ಶೆಯ ಸರಣಿಗಳಿವೆ. ನಿದರ್ಶನ ರೂಪವಾಗಿ ಉ.ಖಂ.ಮಂ.ಯ ಒಂದನ್ನು ಇಲ್ಲಿ ಸ್ಮರಿಸಬಹುದು.

ನಮ್ಮ ಮತದಲ್ಲಿ ಚೇತನರು ಭಿನ್ನಭಿನ್ನರು. ಆದ್ದರಿಂದ ಒಬ್ಬನ ಸುಖದುಃಖಗಳ ಅನುಸಂಧಾನ ಇನ್ನೊಬ್ಬ ಜೀವನಿಗೆ ಬರುವುದಿಲ್ಲ. ಆದರೆ ಅದ್ವೈತಮತವಲ್ಲಿ

ಚೇತನ ಒಂದೇ.

ಹಾಗಾದರೆ ಒಬ್ಬನಿಗೆ ಉಂಟಾಗುವ ಸುಖದುಃಖಗಳ ಅನುಸಂಧಾನ ಇನ್ನೊಬ್ಬನಿಗೆ ಏಕೆ ಬರುವುದಿಲ್ಲ ? ಬರಲಿ ಎಂದು ಅವರ ಮೇಲೆ ನಮ್ಮ ಪ್ರಬಲವಾದ ಆಕ್ಷೇಪ. ಇದಕ್ಕೆ ಉತ್ತರವಾಗಿ ಚೈತನ್ಯವು ಒಂದೇ ಆದರೂ ಉಪಾಧಿ ಭೇದವಿರುವುದರಿಂದ ಅನುಸಂಧಾನ ಪರಸ್ಪರವಾಗಿ ಬರುವುದಿಲ್ಲ. ಅನುಸಂಧಾನಕ್ಕೆ ಉಪಾಧಿ ಭೇದಾಭಾವ ಕಾರಣ ಎನ್ನುತ್ತಾರೆ. ಇಲ್ಲಿ ವ್ಯಾಸರಾಜರು ಉಪಾಧಿಭೇದಾಭಾವ ಎನ್ನುವಾಗ ಉಪಾಧಿ ಎಂದರೆ ಅಂತಃಕರಣವೇ, ಅವಿದ್ಯೆಯೋ, ಅಜ್ಞಾನವೇ, ದೇಹವೇ ಎಂದು ಪ್ರಶ್ನೆಮಾಡಿ ಯಾವುವನ್ನೂ ಒಪ್ಪಲು ಬರುವುದಿಲ್ಲ. ಅಥವಾ ಅಜ್ಞಾನ ರೂಪ ಉಪಾಧಿಯ ಏಕತೆಯೂ ಪರಸ್ಪರ ಅನುಸಂಧಾನಕ್ಕೆ ಪ್ರಯೋಜಕವಲ್ಲ ಎಂದು ಹೇಳಿ ಸ್ವರೂಪೈಕ್ಯವಿದ್ದರೆ ಅನುಸಂಧಾನ ಬರಲೇ ಬೇಕು ಎಂದು ಸಮರ್ಥಿಸುತ್ತಾರೆ.

ಉಪಾಧಿಯೆಂದರೆ ಅಂತಃಕರಣ. ಆದ್ದರಿಂದ ಅಂತಃಕರಣ ಭೇದಾಭಾವವು ಅನುಸಂಧಾನಕ್ಕೆ ಪ್ರಯೋಜಕವೆಂಬ ಮೊದಲನೆಯ ಪಕ್ಷವನ್ನು ವಿಚಾರಕ್ಕೆ ತೆಗೆದುಕೊಳ್ಳುತ್ತಾರೆ. ಹಸ್ತದಲ್ಲಿ ಆಗುವ ಸುಖದ ಅನುಸಂಧಾನವು ಪಾದದಲ್ಲಿರುವ ಚೈತನ್ಯಕ್ಕೆ ಅನುಸಂಧಾನಕ್ಕೆ ಬರುವುದಷ್ಟೆ. ಏಕೆಂದರೆ ಇಲ್ಲಿ ಹಸ್ತ, ಪಾದ ಮೊದಲಾದ ಉಪಾಧಿಗಳು ಭಿನ್ನವಾದರೂ ಅಂತಃಕರಣ ರೂಪವಾದ ಉಪಾಧಿ ಒಂದೇ. ಅದರ ಭೇದಾಭಾವವಿದೆ. ಸೌಭರಿ ಮೊದಲಾದ ಯೋಗಿಗಳಿಗೂ ಶರೀರವಿದ್ದರೂ ಅಂತಃಕರಣ ಒಂದೇ. ಆದ್ದರಿಂದ ಅಂತಃಕರಣ ಭೇದಾಭಾವವಿರುವುದರಿಂದ ಎಲ್ಲಾ ಶರೀರಗಳ ಸುಖಾನುಸಂಧಾನ ಬರುತ್ತದೆ. ಚೈತ್ರ ಮೈತ್ರರಿಗೆ ಅಂತಃಕರಣ ಭೇದವಿರುವುದರಿಂದ ಪರಸ್ಪರಾನುಸಂಧಾನವಿಲ್ಲ. ತಾಯಿಯ ಗರ್ಭದಲ್ಲಿರುವ ಶಿಶುವಿಗೆ ತಾಯಿಯ ಸುಖದುಃಖಗಳ ಅನುಸಂಧಾನವಿಲ್ಲ. ಏಕೆಂದರೆ ಅಂತಃಕರಣ ಭೇದವಿದೆ. ಇದು ಅದ್ವೈತಿಗಳ ವಾದ.

ವ್ಯಾಸರಾಜರು ಇದನ್ನು ಹೀಗೆ ವಿಮರ್ಶೆಮಾಡುತ್ತಾರೆ. ಅದ್ವೈತಮತದಲ್ಲಿ ಸುಷುಪ್ತಿಯಲ್ಲಿ ಅಂತಃಕರಣಕ್ಕೆ ನಾಶವನ್ನೊಪ್ಪುತ್ತಾರೆ. ಪುನಃ ಉಂಟಾಗುವ ಜಾಗ್ರದವಸ್ಥೆಯಲ್ಲಿ ಬೇರೆಯೇ ಅಂತಃಕರಣವುಂಟಾಗುತ್ತದೆ. ಆದ್ದರಿಂದ ಒಬ್ಬ ಜೀವನಿಗೆ ಪ್ರತಿದಿನವೂ ಬೇರೆಬೇರೆ ಅಂತಃಕರಣವು ಬರುವುದರಿಂದ ಅಂತಃಕರಣ ಭೇದವೇ ಇದೆ. ಆದ್ದರಿಂದ ನಿನ್ನೇ ನಾನು ದುಃಖಪಟ್ಟೆ ಎಂಬ ಅನುಸಂಧಾನವು ಈ ದಿನ ಚೈತ್ರನಿಗೆ ಬರದೆ ಹೋಗಲಿ ಎಂಬ ಆಪತ್ತಿ ಬರುತ್ತದೆ. ಹಾಗೆಯೇ ಸುಷುಪ್ತಿಯಲ್ಲಿರುವ ಜೀವನಿಗೆ ಅಂತಃಕರಣಲಯವಾದಂತೆ ಮುಕ್ತ ಜೀವನಿಗೂ ಅಂತಃಕರಣಲಯವಾಗಿದೆ. ಇವರಿಬ್ಬರಲ್ಲಿ ಉಪಾಧಿ ಭೇದಾಭಾವವಿರುವುದರಿಂದ ಸಂಸಾರಿಯ ಜಾಗ್ರತ್ಕಾಲೀನ ಸುಖಾದಿಗಳ ಅನುಸಂಧಾನ ಮುಕ್ತನಿಗೆ ಬರಲಿ ಎಂದು ಆಪತ್ತಿಯೂ ಇದೆ ಅಲ್ಲದೆ ಅಂತಃಕರಣವು ಅಣು. ಏಕಕಾಲದಲ್ಲಿ ಬೇರೆಬೇರೆ ದೇಶಗಳಲ್ಲಿರುವ ಯೋಗಿಗಳ

ಶರೀರಗಳಲ್ಲಿಅಣುವಾದ ಅಂತಃಕರಣ ಒಂದೇ ಕಾಲದಲ್ಲಿರುವುದು ಹೇಗೆ ಸಾಧ್ಯ ? ಅಣುವಾದರೂಏಕಕಾಲದಲ್ಲಿ ಬೇರೆ ಬೇರೆ ಶರೀರಗಳಲ್ಲಿರುವುದಾದರೆ ಚೈತ್ರಮೈತ್ರರಿಗಾದರೂಏಕೆ ಅಂತಃಕರಣ ಭೇದವನ್ನೊಪ್ಪಬೇಕು ? ಆದ್ದರಿಂದ ಅಂತಃಕರಣ ರೂಪವಾದ ಉಪಾಧಿಯು ಭೇದಾಭಾವವು ಅನುಸಂಧಾನಕ್ಕೆ ಪ್ರಯೋಜಕವಲ್ಲ.

ಹಾಗಾದರೆ ಅವಿದ್ಯಾರೂಪೋಪಾಧಿ ಭೇದಾಭಾವವು ಅನುಸಂಧಾನಕ್ಕೆ ಪ್ರಯೋಜಕ ಎಂಬ ಎರಡನೆಯ ಪಕ್ಷವನ್ನು ಒಪ್ಪೋಣ ಎಂದು ಅದ್ವೈತಿಗಳ ಅಭಿಪ್ರಾಯ. ಸುಷುಪ್ತಿಯಲ್ಲಿ ಅಂತಃಕರಣದಲಯವಾದರೂ ಅವಿದ್ಯೆಯಲಯುವಿಲ್ಲದಿರುವುದರಿಂದ ಹಿಂದಿನ ಪಕ್ಷದಲ್ಲಿ ಬಂದ ದೋಷ ಈಗ ಬರುವುದಿಲ್ಲ. ಯೋಗಿಗೆ ಅನೇಕ ಶರೀರವಿದ್ದರೂ ಒಂದೇ ಅವಿದ್ಯೆ ಇರುವುದರಿಂದ, ಉಪಾಧಿಯು ಭೇದವಿಲ್ಲ. ಆದ್ದರಿಂದ ಎಲ್ಲಾ ಅನ ಸಂಧ್ಯಾನವು ಬರುತ್ತದೆ. ತಾಯಿಗೂ ಪುತ್ರ ಗರ್ಭಸ್ಥ ಶಿಶುವಿಗೂ ಅವಿದ್ಯಾ ಭೇದವಿರುವುದರಿಂದ ಪರಸ್ಪರ ಅನುಸಂಧಾನವಿಲ್ಲ. ಇದೆಲ್ಲಾ ಬಹುಜೀವವಾದವನ್ನು ಒಪ್ಪಿದರೆ. ಏಕಜೀವವಾದವನ್ನು ಒಪ್ಪಿದರೆ ಒಬ್ಬನಿಗೆ ಸುಖಿ ಒಬ್ಬನಿಗೆ ದುಃಖಿ ಎಂಬ ವ್ಯವಸ್ಥೆಯೇ ಇಲ್ಲವಾದ್ದರಿಂದ ಯಾವ ಸಮಾಧಾನವನ್ನೂ ಹೇಳಬೇಕಾದ ಆಗತ್ಯವಿಲ್ಲ.

ಇದಕ್ಕೆ ವ್ಯಾಸರಾಜರ ವಿಮರ್ಶೆ ಹೀಗಿದೆ. ಅದ್ವೈತಮತದಲ್ಲಿ ಜೀವನಿಗೆ ಮಾತ್ರ ಅವಿದ್ಯೆಯು ಉಪಾಧಿ. ಈಶ್ವರನಿಗೆ ಅವಿದ್ಯೆ ಉಪಾಧಿಯಿಲ್ಲ. ಮಾಯಯೇ ಉಪಾಧಿ. (ಅವಿದ್ಯೆ ಮಾಯೆ ಎರಡೂ ಅಜ್ಞಾನದ ಎರಡು ಕವಲುಗಳೆಂದು ಅವರ ಅಭಿಪ್ರಾಯ) ಆದ್ದರಿಂದ ಈಶ್ವರನಿಗೆ ಅವಿದ್ಯಾರೂಪ ಉಪಾಧಿ ಭೇದವು ಇಲ್ಲದಿರುವುದರಿಂದ ಜೀವನಿಗೆ ಬರುವ ಐಂದ್ರಿಯಕ ಸುಖಾನುಸಂಧಾನ ಈಶ್ವರನಿಗೆ ಬರಲಿ ಎಂಬ ಆಪತ್ತಿ ಇದೆ.

ಹಾಗಾದರೆ ಅಜ್ಞಾನರೂಪ ಉಪಾಧಿ ಭೇದವಿಲ್ಲದಿರುವುದೇ ಕಾರಣ ಎಂದು ಹೇಳುತ್ತೇವೆ ಎಂದು ಅದ್ವೈತಿಗಳ ಅಭಿಪ್ರಾಯ. ಈಶ್ವರನಿಗೆ ಅವಿದ್ಯೆ ಇಲ್ಲದಿದ್ದರೂ ಅಜ್ಞಾನವಿರುವುದರಿಂದ ಅಜ್ಞಾನರೂಪ ಉಪಾಧಿಭೇದವೇ ಇದೆ. ಆದ್ದರಿಂದ ಜೀವನಿಗೆ ಬರುವ ಸುಖಾದಿಗಳ ಅನುಸಂಧಾನವಿಲ್ಲ.

ಇದನ್ನು ವ್ಯಾಸರಾಜರು ಹೀಗೆ ವಿಮರ್ಶೆ ಮಾಡುತ್ತಾರೆ. ಈಶ್ವರನ ಉಪಾಧಿಯಾದ ಮಾಯೆಯನ್ನು ಅಜ್ಞಾನವೆಂದು ಹೇಳುವುದು ಸರಿಯಲ್ಲ. ಏಕೆಂದರೆ ಪ್ರಪಂಚದಲ್ಲಿ ಎಂದೂ ಮಾಯೆಯನ್ನು ಅಜ್ಞಾನವೆಂದಾಗಲೀ, ಮಾಯಾವಿಯು ತನ್ನ ಅಜ್ಞಾನದಿಂದ ಐಂದ್ರಜಾಲಿಕ ಪದಾರ್ಥಗಳನ್ನು ತೋರಿಸುವುದಿಲ್ಲ. ಆದರೆ ತನ್ನ ವಿಶೇಷ ಸಾಮರ್ಥ್ಯ ಅಥವಾ ಚಮತ್ಕಾರದಿಂದ ತೋರಿಸುತ್ತಾನೆ. ಆದ್ದರಿಂದ

ಈಶ್ವರನಿಗೆ ಅಜ್ಞಾನವನ್ನು ಒಪ್ಪಿ ಅದು ಜೀವನ ಅಜ್ಞಾನಕ್ಕಿಂತ ಭಿನ್ನವಾದ್ದರಿಂದ ಉಪಾಧಿಭೇದವನ್ನು ಒಪ್ಪಿ ಆಪತ್ತಿಯನ್ನು ಪರಿಹರಿಸಲು ಬರುವುದಿಲ್ಲ. ಅಲ್ಲದೆ ಮುಕ್ತನಿಗೆ ಅಜ್ಞಾನವಿಲ್ಲದಿರುವುದರಿಂದ ಅಲ್ಲಿ ಉಪಾಧಿ ಭೇದವನ್ನು ಹೇಳಲು ಸಾಧ್ಯ ವಿಲ್ಲ. ಆದ್ದರಿಂದ ಮುಕ್ತನಿಗೆ ಸಂಸಾರಿಯ ಸುಖಾದಿಗಳ ಅನುಸಂಧಾನ ಬಸಲಿ ಎಂಬ ಆಪತ್ತಿಯು ಇದ್ದೇ ಇದೆ.

ಹೀಗೆಯೇ ಉಳಿದ ಪಕ್ಷಗಳನ್ನೂ ವಿಮರ್ಶೆಮಾಡಿ ಚೈತನ್ಯೈಕ್ಯವನ್ನು ಒಪ್ಪಿದರೆ ಪರಸ್ಪರಾನುಸಂಧಾನದ ತಪ್ಪಿಸುವ ಆಪತ್ತಿಯನ್ನು ಉಪಾಯವೇ ಇಲ್ಲ ಎಂದು ಸಮರ್ಥಿಸುತ್ತಾನೆ.

ಉಪಾಧಿ ಖಂಡನೆ ಮಂದಾರ ಮಂಜರಿಯಲ್ಲಿ ಒಂದು ಮುಖ್ಯವಾದ ಉಲ್ಲೇಖವಿದೆ. ಭೇದಸಂಜೀವಿನ್ಯಾಂಅಸ್ಮಾಭಿಃ ಎಂದು ಇಲ್ಲಿ 'ಭೇದ ಸಂಜೀವನೀ' ಎಂಬ ತಮ್ಮ ಗ್ರಂಥವನ್ನು ಉಲ್ಲೇಖಿಸುತ್ತಾರೆ. ಆ ಗ್ರಂಥದಲ್ಲಿ ಘಟ, ಪಟ ಮೊದ ಲಾದ ಶಬ್ದಗಳಿಗೆ ನೈಯಾಯಿಕ ಮತದ ರೀತಿಯಿಂದ ಅಪರ್ಯಾಯತ್ವವನ್ನು ಪ್ರತಿ ಪಾದಿಸಿದ್ದೇವೆ ಎನ್ನುತ್ತಾರೆ. ಆದರೆ ಅವರ ಪ್ರಸಿದ್ಧವಾದ 'ಭೇದೋಜ್ಜೀವನ' ಗ್ರಂಥದಲ್ಲಿ ಈ ವಿಷಯ ಬರುವುದಿಲ್ಲ. ಆದ್ದರಿಂದ ಭೇದಸಂಜೀವಿನಿಯು ನಮಗೆ ದೊರೆಯದಿರುವ ವ್ಯಾಸರಾಜರ ಇನ್ನೊಂದು ಗ್ರಂಥವೆಂದು ತಿಳಿಯುತ್ತದೆ. 'ಪ್ರಪಂಚಸ್ತು ಸತ್ತರ್ಕವಿಲಿಸ' ಹಾಗೆಯೆ ಮಾಯಾವಾದ. ಖಂ. ಮಂ. ಮಂ. ಯಲ್ಲಿ ಇನ್ನೊಂದು ಉಲ್ಲೇಖವಿದೆ.

ಈ ವಿಷಯವನ್ನು 'ಸತ್ತರ್ಕವಿಲಾಸ' ವೆಂಬ ನಮ್ಮ ಗ್ರಂಥದಲ್ಲಿ ವಿಸ್ತಾರ ವಾಗಿ ನಿರೂಪಿಸಿದ್ದೇವೆ ಎಂದು ಹೇಳಿದ್ದಾರೆ. ಈ ವಾಕ್ಯವು ಅದ್ವೈತ ಮತ ನಿರಾ ಕರಣೆಯ ಪ್ರಸ್ತಾವದಲ್ಲಿ ಬಂದಿದೆ. ಆದ್ದರಿಂದ ಈ ಗ್ರಂಥವು ಪ್ರಸಿದ್ಧವಾದ ತರ್ಕ ತಾಂಡವಕ್ಕಿಂತ ಬೇರೆ. ಏಕೆಂದರೆ ತರ್ಕತಾಂಡವದಲ್ಲಿ ಈ ವಿಷಯ ಬರುವುದಿಲ್ಲ. ಅಲ್ಲದೆ ಅದು ನ್ಯಾಯ ವೈಶೇಷಿಕ ಮತದ ನಿರಾಕರಣೆಗಾಗಿ ಇದ್ದರೂ ಅದಕ್ಕೆ 'ಸತ್ತರ್ಕವಿಲಾಸ' ವೆಂಬ ಹೆಸರು ಎಲ್ಲೂ ಹೇಳಲ್ಪಟ್ಟಿಲ್ಲ. ಅಲ್ಲದೆ ಪಾಂಡುರಂಗೀ ಗುರುರಾಜೀಯದಲ್ಲಿ ನ್ಯಾಯಾಮೃತ ಉಲ್ಲೇಖದ ಜೊತೆಗೆ ಸತ್ತರ್ಕವಿಲಾಸದ ಉಲ್ಲೇ ಖವೂ ಇದೆ. ಆದ್ದರಿಂದ ಸತ್ತರ್ಕವಿಲಾಸವೂ ಇದುವರೆಗೆ ದೊರೆಯದಿರುವ ವ್ಯಾಸ ರಾಜರ ಇನ್ನೊಂದು ಗ್ರಂಥ ಎಂದು ತೀರ್ಮಾನಿಸಬಹುದಾಗಿದೆ.

ಹೀಗೆ ಮಂದಾರ ಮಂಜರಿಗಳು, ಆಚಾರ್ಯರ ಮೂಲಕ್ಕೆ, ಜಯತೀರ್ಥರ ಟೀಕೆಗೆ ಅನುಗುಣವಾಗಿ ಗಾತ್ರದಲ್ಲಿ ಚಿಕ್ಕವಾಗಿದ್ದರೂ, ಸಾಮರ್ಥ್ಯದಲ್ಲಿ ದೊಡ್ಡ ವಾಗಿದ್ದು ಶ್ರೀ ಮಧ್ವಶಾಸ್ತ್ರದ ಅಧ್ಯಯನಕ್ಕೆ ಅತ್ಯಂತ ಅಗತ್ಯವಾಗಿವೆ.

# ಶ್ರೀ ವ್ಯಾಸರಾಜರ ಕನ್ನಡ ಕೃತಿಗಳಲ್ಲಿ

# ತತ್ವಪ್ರತಿಪಾದನೆ

---

ಡಾ. ಕೆ. ಎಂ. ಕೃಷ್ಣರಾವ್

**ಮ**ಹಾವ್ಯಕ್ತಿ-ವಿದ್ವತ್ಪುರುಷರಾದ ಶ್ರೀವ್ಯಾಸರಾಯರು ತಾಯ್ನುಡಿಯಲ್ಲಿ ಸರಳವಾಗಿ ಎಲ್ಲರಿಗೂ ಅರ್ಥವಾಗುವಂತೆ ರಾಗ, ತಾಳ, ಲಯಬದ್ಧವಾಗಿ ಸಂಕೀರ್ತನ ಸಾಹಿತ್ಯವನ್ನು ತತ್ವಭರಿತವಾಗಿ ರಚಿಸಿದರೆಂದರೆ ಅನೇಕರು ಆಶ್ಚರ್ಯ ಚಕಿತರಾಗಬಹುದಾದರೂ ಅದೊಂದು ಸತ್ಯವಿಚಾರವಾಗಿದೆ. ಅಂತಹ ಅವರ ಕೆಲವು ಕೃತಿರತ್ನಗಳನ್ನು ಪರಿಭಾವಿಸುವುದೇ ಈ ಕಿರುಲೇಖನದ ಗುರಿಯಾಗಿದೆ.

ವಿಶ್ವವಿಖ್ಯಾತವಾದ ಭಾರತೀಯ ಆಧ್ಯಾತ್ಮಲೋಕದ ಪರಮ ಸಂದೇಶವೆನಿಸಿದ ಭಗವದ್ವಾಣಿ ಶ್ರೀಮದ್ಭಗವದ್ಗೀತೆಯ ಹದನೆಂಟು ಅಧ್ಯಾಯಗಳನ್ನು ಶ್ರೀವ್ಯಾಸ ರಾಯರು ಹದಿನೆಂಟು ನುಡಿಗಳಲ್ಲಿ ಸಂಗ್ರಹಿಸಿ ಕನ್ನಡದ ಗನ್ನಡಿಯಲ್ಲಿ ಹಿಡಿದು ಕೊಟ್ಟಿದ್ದಾರೆ–

ವಿದ್ಯಾವಿನಯ ಸಂಪನ್ನೇ ಬ್ರಾಹ್ಮಣೇ ಗವಿ ಹಸ್ತಿನಿ । ಶುನಿಚೈವ ಶ್ವಪಾಕೇ ಚ ಪಂಡಿತಾಃ ಸಮದರ್ಶಿನಃ ॥ ಎಂಬುದರ ಭಾವವನ್ನು ಹಿಡಿದು_ಅಜನಲ್ಲಿ ದ್ವಿಜನಲ್ಲಿ ಗಜದಲ್ಲಿ । ಸಮನಾನಲ್ಲಿ ' ಎಂದು ಅನುವಾದಿಸಿದ್ದಾರೆ.

ಜೀವನಿತ್ಯ, ಅನಾದಿ ಎಂದು ಹೇಳುವ, ಜನ್ಮಾಂತರಗಳನ್ನು ಹೇಳುವ ಗೀತಾ ಶ್ಲೋಕ_ ನೈನಂ ಛಿಂದಂತಿ ಶಸ್ತ್ರಾಣಿ ನೈನಂ ದಹತಿ ಪಾವಕಃ ॥ ವಾಸಾಂಸಿ ಜೀರ್ಣಾನಿ ಯಥಾ ವಿಹಾಯ ನವಾನಿ ಗೃಹ್ಣಾತಿ ನರೋಽಪರಾಣಿ ॥ ಇದನ್ನು–ಮಾರು ತನ ಶೋಷಕ್ಕೆ ಅತ್ಯಭೇದ್ಯ ತಾ ಜೀವನು ಸನಾತನ । ವಸ್ತ್ರದ್ಹಾಂಗೆ ಈ ತನುವು । ಆದಾವು ಹೋದಾವು ಎನಗಯ್ಯಾ । ಆದನಾ ಬಲ್ಲೆನಯ್ಯಾ ॥

ಕರ್ಮಣ್ಯೇವಾಧಿಕಾರಸ್ತೇ ಮಾ ಫಲೇಷು ಕದಾಚನ- ಕರ್ಮದಲ್ಲೇ ನಿನಗಧಿಕಾರ–

ಫಲ ತಾ ಮೂರ । ನಿಯತಂ ಕುರು ಕರ್ಮ ತ್ವಂ-ಜ್ಞಾನ ದೊಡ್ಡದು ಕರ್ಮಬಂಧವ ಬಿಟ್ಟು । ಕರ್ಮಬಿಟ್ಟರೇ ಪ್ರತ್ಯವಾಯವೆಷ್ಟು । ಫಲಬಿಟ್ಟು ನೀ ಮಾಡು ಕರ್ಮಗಳ॥

ಗೋವಿಂದನಲಿ ಮನವಿಟ್ಟವ। ಕಾಮಬಿಟ್ಟವ। ಜಿತದೇಹ ತಾನಾವ। ಯುದ್ಧ ಕರ್ಮವ ಮಾಡೋ। ಪಾಂಡವ। ರಣತಾಂಡವ॥(ಮಯಿ ಸರ್ವಾಣಿ ಕರ್ಮಾಣಿ ಸಂನ್ಯಸ್ಯಾಧ್ಯಾತ್ಮಚೇತಸಾ। ನಿರಾಶೀಃ ನಿರ್ಮಮೋ ಭೂತ್ವಾಯುಧ್ಯಸ್ವ ವಿಗತಜ್ವರಃ॥) 'ಯೋಗ ಸನ್ಯಾಸವೆರಡೂ ಮುಕ್ತಿಗೆ ದೃಢವು। ಭೋಗವಬೆರೆತ ಕೀಳು ಸನ್ಯಾಸ ಯಿರದು॥

ದ್ವೈತಸಿದ್ಧಾಂತದ ಪ್ರಮುಖ ಪ್ರಮೇಯಗಳಲ್ಲಿ ಕೆಲವನ್ನು ಹೀಗೆ ಹೇಳಿದ್ದಾರೆ-

ಹರಿಯೆ ಸರ್ವೋತ್ತಮ ಕಾಣೆ ಲಕುಮಿ ಬೊಮ್ಮ। ಹರಇಂದ್ರಾದ್ಯಖಿಳರು ತವಸೇವಕರು। ವರ ತಾರತಮ್ಯ ಪಂಚಭೇದ ಸತ್ಯವೆಂದು। ನೆರೆಪೇಳುವ ವಾಯುಮತದ ಸುಜ್ಞಾನವ॥ ಸಕಲವಿಬುಧೋತ್ತಮರಲ್ಲಿ ನಮ್ರತೆಯು। ಸುಖತೀರ್ಥರಲಿ ಗುರುಭಾವನೆಯು। ಮುಕುತಿಪ್ರದಾಯಕ ಸಿರಿಕೃಷ್ಣನಲ್ಲಿ। ಅಕಳಂಕವಾದ ನವವಿಧ ಭಕುತಿಯನು॥ ಜನುಮದಲಿ ಕೊಡುಕಂಡ್ಯ ಹರಿಯೆ। ಅನಿಮಿತ್ತಬಂಧು ಕೃಷ್ಣದಯದಿಂದ ಎನಗೆ॥

ಪುಣ್ಯಪಾಪಗಳ ವ್ಯಾಖ್ಯೆ ಅವರದು ಹೀಗಿದೆ-ಮಾಡು ಎಂದದ್ದನು ಬಿಟ್ಟರೆ ಅಪರಾಧ। ಬೇಡವೆಂದದ್ದನು ಮಾಡುವುದಪರಾಧ॥ ವಿಧಿನಿಷೇಧಗಳನ್ನು ಹೇಳಿರುವ ಶ್ರುತಿಸ್ಮೃತಿಗಳು ಶ್ರೀಹರಿಯ ಆಜ್ಞೆ ಎನ್ನಲಾಗಿದೆ. ಅಲ್ಲಿ ಮಾಡು ಎಂದದ್ದನ್ನು ಮಾಡದೇ ಬಿಟ್ಟರೆ, ಮಾಡಬೇಡ ಎಂಬ ನಿಷೇಧವನ್ನು ಉಲ್ಲಂಘನೆ ಮಾಡಿದರೆ ಅಪರಾಧ-ಪಾಪ. ಮಾಡು ಎಂದಿರುವುದನ್ನು ಮಾಡಿದರೆ ಪುಣ್ಯ. ಬಿಡು ಎಂದಿರುವುದನ್ನು ಬಿಟ್ಟರೆ ಪುಣ್ಯ. ಈ ಮರ್ಮವನ್ನರಿತು ಬಾಳನ್ನು ಹಸನಾಗಿನಡೆಸಬೇಕು.

ಸಂತತಂಚಿಂತಯೇನಂತಂ ಅಂತಕಾಲೇ ವಿಶೇಷತಃ ॥ ಎಂಬ ಆನಂದತೀರ್ಥರ ಸಂದೇಶವನ್ನು ಶ್ರೀ ವ್ಯಾಸರಾಜರು ಹೀಗೆ ಮುದ್ದಾಗಿ ಕನ್ನಡಿಸಿದ್ದಾರೆ–ಸಂತತದಲ್ಲಿ ನಿನ್ನ ನಾಮ ನಾಲಿಗೆಯಲ್ಲಿ । ಅಂತ್ಯಕಾಲದಲಿ ವಿಶೇಷವಾಗಲೋ। ಕೃಷ್ಣ॥
ನಾವು ನಿತ್ಯವೂ ಎಷ್ಟೂ ಅಪರಾಧಗಳನ್ನು ಮಾಡುತ್ತೇವೆ. ಎಲ್ಲಾ ಒಂದೇ ದರ್ಜೆಯದಲ್ಲ. ಮುಖ್ಯ ಅಪರಾಧಗಳು ಯಾವುವು ಎಂತಹವು ಎಂಬುದನ್ನು ಶ್ರೀವ್ಯಾಸರಾಜರು ಅಪ್ಪಣೆ ಕೊಡಿಸಿದ್ದಾರೆ-ಒಂದು ಉಗಾಭೋಗದಲ್ಲಿ:-ಆದ್ಯಪರಾಧ ಮಿಥ್ಯಾಜ್ಞಾನ। ದ್ವಿತೀಯ ಹರಿಯ ವಿಸ್ಮರಣ। ನಿಷಿದ್ಧಾವಿಹಿತಾಚರಣ। ಚತುರ್ಥ ಅಯೋಗ್ಯರಲ್ಲುಪದೇಶಕರಣ॥

ಜೀವರು ಶ್ರೀಹರಿಯಲ್ಲೇ—ಅತ್ಯಂತ ಸನಿಹದಲ್ಲೇ ಇದ್ದರೂ ಅವನ ಮಹಿಮೆಯನ್ನು ಸಾಕಲ್ಯೇನ ತಿಳಿಯುವುದಿಲ್ಲವೆಂಬ ತತ್ವವನ್ನು ಹೀಗೆ ಹೇಳಿದ್ದಾರೆ-ಹರಿನಿನ್ನ ರೋಮಕೂಪದಲಿ ಜೀವಿಪ। ಸರಸಿಜಭವಾಂಡಕೋಟಿಯಲಿ। ತುರುಗಿಪ್ಪ ಬ್ರಹ್ಮರು ದ್ರ್ಯಾದಿ ಜೀವರುಗಳು। ಹರಿ ನಿನ್ನಮಹಿಮೆಯ ಪರ್ಯಾಯ ಬಲ್ಲರೇ ॥ ಇಲ್ಲ ಎಂಬ ಉತ್ತರ ಪ್ರಶ್ನೆಯಲ್ಲೇ ಅಡಗಿದೆ.

ಶ್ರೀಹರಿಯ ಉಪಾಸನೆ ಮಾಡುವವರು ಅನೇಕರು. ಯಾರ್ಯಾರು ಹೇಗೆ ಮಾಡುತ್ತಾರೆಂಬುದನ್ನು ಸಚಿತ್ರವಾಗಿ ಸ್ವಾರಸ್ಯವಾಗಿ ಸರಳವಾಗಿ ಬಣ್ಣಿಸಿದ್ದಾರೆ-ಪತಿಯೆಂದುಪಾಸ್ಯ ಪದುಮಜಾತೆಗೆ। ಪಿತನೆಂದುಪಾಸ್ಯ ಪದುಮಜಂಗೆ। ಶ್ವಶುರನೆಂದುಪಾಸ್ಯ ಸರಸ್ವತಿಗೆ। ಪಿತಾಮಹನೆಂದುಪಾಸ್ಯ ಪಿನಾಕಧರಗೆ। ಸ್ವಾಮಿಯೆಂದುಪಾಸ್ಯ ಸರ್ವರಿಗೆ ಸಿರಿಕೃಷ್ಣ॥' ಸರಸಿಜಾಕ್ಷನು ವಿರಿಂಚಗೆ ಗುರು। ಪುರಹರನಿಗೆ ಪರಮಗುರು ಮಿಕ್ಕ। ಸುರತತಿಗೆಲ್ಲ ಆದಿಗುರು। ನರೋತ್ತಮರಿಗೆಲ್ಲ ಮೂಲಗುರು। ಪರದೈವ ಶ್ರೀಕೃಷ್ಣಗೆ ಗುರುವಾದ ಸಾಂದೀಪ ಗಡ॥' ಕೊನೆಯ ಸಾಲಿನಲ್ಲಿ ಶ್ರೀಕೃಷ್ಣ ಯಾರು. ಅವನ ಶಿಷ್ಯ-ಗುರು ಸಂಬಂಧ ಎಂತಹದು ಎಂಬ ಧ್ವನಿ ಅಡಗಿದೆ.

ಹೀಗೆ ವ್ಯಾಸರಾಯರು ಸರಳ ನುಡಿಗಳಲ್ಲಿ ಹಿರಿಯ ತತ್ವಗಳನ್ನು ಹಿಡಿದಿರಿಸಿದ್ದಾರೆ.

ooo

---

## ಸಾಕಿನ್ನು ಈ ಜಗದ ಚಿಂತೆ

ಗುರುಹಿರಿಯರ ನಿಂದ್ಯವಾಡಿ - ಕೆಟ್ಟ । ಪರರೊಡವೆಗೆ ಮೋಸ ಮಾಡಿ - ನಾನಾ । ತೆರದ ಆಟದ ಕಾಸು ಕೂಡಿ - ಬಚ್ಚಿ । ಇರಿಸಿದೆ ಸಂಚಿತಗೂಡಿ - ಆಹ । ಬರುವುದೇ ಸಂಗಡ ನರಕ ಭಾಜನನಾಗಿ । ಅರಿಯದೆ ಆಯುಷ್ಯ ಬರಿದೆ ಕಳೆವೆ ನಿನಗೆ ।॥ ಹಣ ಹೊನ್ನುಗಳು ನಿನಗೆ ಬೇಕೆ - ಬಲು । ದಣಿವುಂಟೆ ಭಜನೆ ಮಾಳ್ಪುದಕೆ - ಪುಣ್ಯ । ಕಣೆಯುಂಟೆ ನೋಡು ಈವುದಕೆ ಆಹ । ಗುಣವುಳ್ಳ ಹರಿನಾಮ ಗಣನೆಗೆ ತಾರದೆ ಅನುದಿನ ದುಷ್ಟ ಚಿಂತೆಯೊಳಿರುವ ನಿನಗೆ ॥

---

# ವ್ಯಾಸತೀರ್ಥರ ಭೇದೋಜ್ಜೀವನ

—ಆನಂದತೀರ್ಥ ನಾಗಸಂಪಿಗೆ

**ಭೇದೋಜ್ಜೀವನ ಟೀಕೆಟಿಪ್ಪಣಿಗಳು**— ಆಚಾರ್ಯಮಧ್ವರ ಅಣುಭಾಷ್ಯದಂತೆ, ಗಾತ್ರದಿಂದ ಕಿರಿಯದಾದರೂ, ತತ್ವವಾದದ ಜೀವಾಳವಾದ ಭೇದವನ್ನು ಸಾಧಿಸುವ ಈ ಗ್ರಂಥ ಅಪೂರ್ವವಾದ ಅನೇಕ ವೈಶಿಷ್ಟ್ಯಗಳನ್ನೊಳಗೊಂಡಿದೆ. 'ದ್ವೈತದ್ಯುಮಣಿ' ಯು ಮೂಲಕ ವಿದ್ವಲ್ಲೋಕದಲ್ಲಿ ಅದ್ವಿತೀಯ ಸ್ಥಾನವನ್ನು ಪಡೆದ 1. ಹುಲಗೀ ಶ್ರೀಪತ್ಯಾಚಾರ್ಯರು, 2. ಕಾಶೀ ತಿಮ್ಮಣ್ಣಾಚಾರ್ಯರು, 3. ಶರ್ಕರಾ ಶ್ರೀನಿವಾಸತೀರ್ಥರು, 4. ಭಗವಂತರಾಯ, 5. ಕುಂಭಾರಿ ವಾಸುದೇವಾಚಾರ್ಯ, 6. ಮುದ್ಗಲಾನಂದತೀರ್ಥರು, ಇದಕ್ಕೆ ಪ್ರೌಢವಾದ ಮತ್ತು ಅಮೂಲ್ಯವಾದ ಟಿಪ್ಪಣಿ ರಚಿಸಿದ್ದಾರೆ.

**ಪೂರ್ವಪಕ್ಷ ಸಂಕ್ಷೇಪ**— ಸ್ವಾತಂತ್ರ್ಯ ಸಾರ್ವಜ್ಞ್ಯಾದಿ ಅನಂತ ಶುಭಗುಣಗಳ ಅಂತಿಮ ಧಾಮನಾದ, ಚೇತನಾಚೇತನಾತ್ಮಕವಾದ ಸಮಸ್ತ ವಿಶ್ವದಿಂದ ಭಿನ್ನನಾದ ಶ್ರೀವಿಷ್ಣುವು ವಿಜಯಶೀಲನಾಗಲಿ ಎಂಬ ಮಂಗಲಸ್ತವದೊಂದಿಗೆ ಪ್ರಾರಂಭವಾಗುವ ಈ ಕೃತಿ— ವಿಷ್ಣ್ವಾಖ್ಯನಾದ ಪರಬ್ರಹ್ಮನು ಚೇತನಾಚೇತನಾತ್ಮಕವಾದ ವಿಶ್ವದಿಂದ ಭಿನ್ನನಾಗಿರಲು ಹೇಗೆ ತಾನೆ ಸಾಧ್ಯ ! ಎಂಬುದಾಗಿ ಪೂರ್ವಪಕ್ಷವನ್ನು ಪ್ರಾರಂಭಿಸುತ್ತದೆ.

**ಪ್ರಮಾಣಗಳು ಭೇದಸಾಧಕವಲ್ಲ**— ಜೀವಾತ್ಮ ಪರಮಾತ್ಮಗಳಲ್ಲಿ ಭೇದವು ಪ್ರತ್ಯಕ್ಷ ಅಥವಾ ಅನುಮಾನಾಗಮಗಳಿಂದ ಸಿದ್ಧವಾಗುವುದಿಲ್ಲ. "ಪರಮಾತ್ಮನು ಜೀವಾತ್ಮನಿಂದ ಭಿನ್ನನಾಗಿದ್ದಾನೆ" ಎಂಬ ಪ್ರತೀತಿಯಲ್ಲಿ, ಧರ್ಮಿಯಾದ ಈಶ್ವರನ ಪ್ರತ್ಯಕ್ಷವಿಲ್ಲದಿರುವುದೇ ಭೇಧ ಪ್ರತೀತಿಗೆ ಬಾಧಕವಾಗಿದೆ. ಧರ್ಮಿ ಮತ್ತು ಪ್ರತಿಯೋಗಿಗಳೆರಡರ ಪ್ರತ್ಯಕ್ಷಗಳೂ ಭೇದ ಪ್ರತ್ಯಕ್ಷಕ್ಕೆ ಕಾರಣವಷ್ಟೆ !

ಇದರಂತೆಯೇ 'ಜೀವಾತ್ಮನು ಪರಮಾತ್ಮನಿಂದ ಭಿನ್ನ' ವೆಂಬ ಪ್ರತೀತಿಯಲ್ಲಿಯೂ ಪ್ರತಿಯೋಗಿಯಾದ ಪರಮಾತ್ಮನ ಪ್ರತ್ಯಕ್ಷವಿರುವುದಿಲ್ಲ. ಆದ್ದರಿಂದ

ಪ್ರತ್ಯಕ್ಷವು ಜೀವೇಶ್ವರರಲ್ಲಿ ಭೇದಗ್ರಾಹಕವಾಗಲಾರದು. ಇದರಂತೆಯೇ ವಿರುದ್ಧವಾದ ಔಷ್ಣ್ಯ ಹಾಗೂ ಶೈತ್ಯಗಳನ್ನೂ ಹೊಂದಿರುವುದರಿಂದ ಜಲಾನಿಲಗಳು ಭಿನ್ನವಾಗಿರುವಂತೆ, ಸರ್ವಜ್ಞತ್ವ ಅಲ್ಪಜ್ಞತ್ವಾದಿ ವಿರುದ್ಧ ಧರ್ಮಗಳಿಗೆ ಆಸರೆಯಾಗಿರುವ ಪರಮಾತ್ಮ ಜೀವಾತ್ಮರುಗಳಲ್ಲಿಯೂ ಭೇದವಿದೆ ಎಂಬ ಅನುಮಾನವೂ ಅಯುಕ್ತವಾಗಿದೆ.

ಈ ಅನುಮಾನದಲ್ಲಿ ಸಾಧ್ಯವಾದ ಭೇದವು ಪಾರಮಾರ್ಥಿಕವೇ ? ವ್ಯಾವಹಾರಿಕವೇ ? ಪಾರಮಾರ್ಥಿಕವಾದ ಭೇದವು ಅದ್ವೈತವಾದಿಗಳಿಗೆ ಅಪ್ರಸಿದ್ಧವಾಗಿದೆ. ವ್ಯಾವಹಾರಿಕ ಭೇದವನ್ನು ಅದ್ವೈತವಾದಿಗಳೂ ಅಂಗೀಕರಿಸುವುದರಿಂದ 'ಸಿದ್ಧಸಾಧನತಾ' ದೋಷವಿದೆ. ಆದ್ದರಿಂದ ಅನುಮಾನವೂ ಜೀವೇಶ್ವರರುಗಳಲ್ಲಿ ಭೇದಸಾಧಕವಾಗಲಾರದು.

"ದ್ವಾ ಸುಪರ್ಣಾ""ದ್ವೇ ಬ್ರಹ್ಮಣೀ" ಇತ್ಯಾದಿ ವೇದವಾಕ್ಯಗಳು ಲೋಕಸಿದ್ಧವಾದ ಭೇದವನ್ನು ಅನುವಾದ ಮಾಡುವುದರ ಮೂಲಕ ಸಾರ್ಥಕವೆನಿಸುತ್ತವೆ. ಶ್ರುತಿಯಲ್ಲಿ ಕಂಡುಬರವ ಭೇದದ ಅನುವ ದವು, ನಿಷೇಧಕ್ಕೋಸ್ಕರವಾಗಿ ಮಾಡಲ್ಪಟ್ಟಿದೆ. ಆದ್ದರಿಂದ ಪ್ರತ್ಯಕ್ಷವೇ ಮೊದಲಾದ ಯಾವ ಪ್ರಮಾಣಗಳೂ ಭೇದಸಾಧಕವಲ್ಲವೆಂದು ಪೂರ್ವಪಕ್ಷವನ್ನು ಮಂಡಿಸಲಾಗಿದೆ.

**ಸಿದ್ಧಾಂತಸಾರ**— ಹೀಗೆ ಭೇದವನ್ನು ಖಂಡಿಸುವುದು ಅನುಚಿತವಾಗಿದೆ. ಪರಮಾತ್ಮನಿಗೆಯೇ, ತಾನು ಜೀವಾತ್ಮನಿಂದ ಭಿನ್ನನೆಂಬ ಪ್ರತ್ಯಕ್ಷವಿದೆ. ಆದ್ದರಿಂದ ಧರ್ಮಿಯಾದ ಈಶ್ವರನಿಗಿರುವ ಈ ಪ್ರತ್ಯಕ್ಷವೇ ಭೇದಗ್ರಾಹಕವಾಗಿದೆ. ನಮಗೆ ಈಶ್ವರನ ಪ್ರತ್ಯಕ್ಷವಿಲ್ಲದಿರುವಾಗ್ಯೂ, ಪರಮಾತ್ಮನಿಗಿರುವ ಜೈವ ಭೇದಾನುಭವದ ವಿಷಯದಲ್ಲಿ "ಉತ್ತಮನು ಕ್ಷರಾಕ್ಷರಗಳಿಗಿಂತ ಭಿನ್ನನಾಗಿದ್ದಾನೆ"ಂಬ ಪರಮಾತ್ಮನ ವಚನವೇ ಪ್ರಮಾಣವಾಗಿರುತ್ತದೆ.

ಇದರಂತೆ ಜೀವನಿಗೆ, ಈಶ್ವರನಿಂದ ಭೇದವು ಪ್ರತ್ಯಕ್ಷಸಿದ್ಧವಾಗಿದೆ. ಈಶ್ವರನ ಪ್ರತ್ಯಕ್ಷವಿಲ್ಲದೆಯೇ ಅವನಿಂದ ಜೀವನಿಗೆ ಭೇದಗ್ರಹವು ಹೇಗೆ ಸಾಧ್ಯವೆಂದರೆ ?—

ಎರಡು ವಸ್ತುಗಳಲ್ಲಿ ಒಂದು ವಸ್ತುವಿನ ಪ್ರತ್ಯಕ್ಷ, ಇನ್ನೊಂದು ವಸ್ತುವಿನ 'ಜ್ಞಾನ' ವಿದ್ದರೂ ಭೇದವು ಗ್ರಾಹ್ಯವಿರುತ್ತದೆ. ಆದ್ದರಿಂದ ಪ್ರತಿಯೋಗಿಯಾದ ಈಶ್ವರನ ಪ್ರತ್ಯಕ್ಷವೇ ಬೇಕಿಲ್ಲ. 'ಪ್ರತೀತಿಯೇ ಭೇದಗ್ರಹೋಪಯೋಗಿಯಾಗಿದೆ. ಹೇಗೆ, ಇಲ್ಲಿ 'ವಜ್ರ' ವಿರುವುದಿಲ್ಲವೆಂಬ ಪ್ರತ್ಯಕ್ಷ ಬರಲು, 'ಪ್ರತಿಯೋಗಿ'ಯಾದ ವಜ್ರದ ಪ್ರತ್ಯಕ್ಷದ ಆವಶ್ಯಕತೆ ಇರುವುದಿಲ್ಲವೋ, ಮತ್ತು "ಇಲ್ಲಿ ಪಿಶಾಚವಿಲ್ಲ" ಎಂಬ ಪ್ರತ್ಯಕ್ಷ ಬರಲು, ಪ್ರತಿಯೋಗಿಯಾದ ಪಿಶಾಚದ ಪ್ರತ್ಯಕ್ಷವೇ ಬೇಕಿಲ್ಲವೋ, ಅದರಂತೆಯೇ ಪ್ರತಿಯೋಗಿಯಾದ ಈಶ್ವರನ ಪ್ರತ್ಯಕ್ಷವಿಲ್ಲದೆಯೇ, (ಕೇವಲ ಪ್ರತೀತಿ

ತೀರ್ಥ, ದಶಾಶ್ವಮೇಧ ಕ್ಷೇತ್ರ, ಕೇದಾರ ಕ್ಷೇತ್ರ, ಬ್ರಹ್ಮೋದುಂಬುರ ಕ್ಷೇತ್ರ ಇವೆಲ್ಲವೂ ಪವಿತ್ರವಾದ ತೀರ್ಥ ಕ್ಷೇತ್ರಗಳು.

ಸಪ್ತರ್ಷಿಕುಂಡ ಸುಜಂಘನವೆಂಬ ದೇವೀ ತೀರ್ಥ ಈ ಹಾಸ್ಪದ ತೀರ್ಥ, ಕೋಟಿಕೂಟ ತೀರ್ಥ, ಕಿಂದಾನ ತೀರ್ಥ ಕಿಂಜಪ ತೀರ್ಥ, ಕಾರಂಡವ ತೀರ್ಥ, ಅವೇಧ್ಯ ತೀರ್ಥ, ತ್ರಿವಿಷ್ಟಪ, ಪಾಣಿಖಾತ ತೀರ್ಥ, ಮಿಶ್ರತೀರ್ಥ, ಮಧೂವಟ ಕ್ಷೇತ್ರ, ಮನೋಜವ ತೀರ್ಥ, ಕೌಶಿಕೀ ತೀರ್ಥ, ದೇವತೀರ್ಥ, ಋಣ ವಿಮೋಚನ ತೀರ್ಥ. ನೃಗಧೂಮ ತೀರ್ಥ, ವಿಷ್ಣುಪಾದ ಇವೆಲ್ಲವೂ ಪವಿತ್ರವಾದ ತೀರ್ಥಕ್ಷೇತ್ರಗಳು.

ಅಮರ ಹ್ರದ, ಕೋಟಿ ತೀರ್ಥ, ಶ್ರೀಕುಂಜ, ಶಾಲಿತೀರ್ಥ, ನೈಮಿಷಾರಣ್ಯದ ತೀರ್ಥ, ಬ್ರಹ್ಮಸ್ಥಾನ, ಸೋಮತೀರ್ಥ, ಕನ್ಯಾ ತೀರ್ಥ. ಬ್ರಹ್ಮತೀರ್ಥ, ಮನಸ್ತೀರ್ಥ ಕಾರುಪಾವನ ತೀರ್ಥ, ಸೌಗಂಧಿಕವನ ಮಣಿತೀರ್ಥ, ಸರಸ್ವತಿ, ಶ್ರೇಷ್ಠವಾದ ಈಶಾನ್ಯ ತೀರ್ಥ, ಪವಿತ್ರವಾದ ಪಂಚಯಜ್ಞ, ತೀರ್ಥ ಇವೆಲ್ಲವೂ ಪವಿತ್ರವಾದ ತೀರ್ಥ ಕ್ಷೇತ್ರಗಳು. ತ್ರಿಶೂಲ ಧಾರಾ ತೀರ್ಥ, ಮಹೇಂದ್ರ ತೀರ್ಥ ದೇವಾಲಯಗಳು, ಶಾಕಂಬರಿ ತೀರ್ಥ, ಸುವರ್ಣವೆಂಬ ದೇವತೀರ್ಥ ಕಲಿಹ್ರದ, ಕ್ಷೀರಶ್ರವ, ವಿರೂಪಾಕ್ಷ, ಭೃಗುತೀರ್ಥ, ಕುಶೋದ್ಭವ, ಬ್ರಹ್ಮತೀರ್ಥ, ಬ್ರಹ್ಮಯೋನಿ, ನೀಲಪರ್ವತ, ಕುಬ್ಜಾಂಬಕ, ಭದ್ರವಟ ವಶಿಷ್ಠಾಶ್ರಮ,ಪ್ರಜಾದ್ವಾರ, ಕಾಲಿಕಾಶ್ರಮ, ರುಂದ್ರಾವರ್ತ ಸುಗಂಧಾಶ್ವ ಕಪಿಲಾವನ, ಭದ್ರಕರ್ಣ ಹ್ರದ, ಶಂಕು ಕರ್ಣ ಹ್ರದ, ಇವೆಲ್ಲವೂ ಪವಿತ್ರವಾದ ತೀರ್ಥ ಕ್ಷೇತ್ರಗಳು.

ಸಪ್ತ ಸರಸ್ವತ ತೀರ್ಥ, ಶುಕ್ರ ತೀರ್ಥ, ಕಪಾಲ ಮೋಚನತೀರ್ಥ, ಅವಕೀರ್ಣ ತೀರ್ಥ. ಕಾಮ್ಯ ಕವನ, ಚತುಸ್ಸಾಮುದ್ರಿಕ ತೀರ್ಥ, ಶತಕ ಸಹಸ್ರಕ, ರೇಣುಕ ತೀರ್ಥ ಪಂಚವಟ ವಿಮೋಚನ ತೀರ್ಥ, ಔಜಸತೀರ್ಥ, ಸ್ಥಾಣುತೀರ್ಥ, ಕುರುತೀರ್ಥ ಸ್ವರ್ಗದ್ವಾರ ತೀರ್ಥ, ಗಂಗಾಹ್ವಯತೀರ್ಥ, ವಿಶ್ವೇಶ್ವರ ಕ್ಷೇತ್ರ, ಪವನಹ್ರದ, ನಾರಾಯಣ ರೂಪ ಇವೆಲ್ಲವೂ ಪರಮ ಪವಿತ್ರವಾದ ತೀರ್ಥ ಕ್ಷೇತ್ರಗಳು.

ಗಂಗಾಹ್ರದ, ವಟ ಬದರೀಪಾಚನ. ಇಂದ್ರಮಾರ್ಗ ಏಕರಾತ್ರ, ಕ್ಷೀರಕಾವಾಸ, ಸೋಮತೀರ್ಥ, ದಧೀಚತೀರ್ಥ· ಶ್ರುತತೀರ್ಥ, ಕೋಟಿತೀರ್ಥ ಸ್ಥಲಗಳು ಭದ್ರಕಾಲೀಹ್ರದ, ಅರುಂಧತೀವನ, ಬ್ರಹ್ಮಾವರ್ತ, ಅಶ್ವವೇದೀ ಕುಬ್ಜಾವನ, ಯಮುನಾ ನದಿಯ ಮೂಲ ಇವೆಲ್ಲವೂ ಪವಿತ್ರವಾದ ತೀರ್ಥ ಕ್ಷೇತ್ರಗಳು.

ವೀರತೀರ್ಥ, ಪವೋಕ್ಷತೀರ್ಥ, ಸಿಂಧುತೀರ್ಥ, ಋಷಿಕಲ್ಯಾತೀರ್ಥ, ಕೃತ್ತಿಕಾ ತೀರ್ಥ, ಭೂ ಸಂಕ್ರಮಣ, ಮಹಾಯಶಾ ವಿದ್ಯೋದ್ಭವ ತೀರ್ಥ, ಮಹಾಶ್ರಮ, ಚತುರ್ಮುಖ ರೂಪವಾದ ಸುಂದರಿಕಾಶ್ರಮ, ಬಾಹುತೀರ್ಥ, ಚಾರುನದೀ, ಅಶೋಕ ಕ್ಷೇತ್ರ, ತಪಸ್ವಿಯಾದ ಮಾರ್ಕಂಡೇಯನ ಪಂಚನದ ತೀರ್ಥ, ಸೋಮತೀರ್ಥ, ಸಿತೋದ, ಮತ್ಸ್ಯೋದರೀ ಕ್ಷೇತ್ರ ಇವೆಲ್ಲವೂ ಪವಿತ್ರವಾದ ತೀರ್ಥ ಕ್ಷೇತ್ರಗಳು.

ನ್ನೇನು ಪ್ರತಿಪಾದಿಸುತ್ತಿಲ್ಲ. 'ಸತ್ಯ' ಪದವು ಶ್ರುತಿಯಲ್ಲಿ ಇಲ್ಲದಿರುವುದೇ ಇದಕ್ಕೆ ಸಾಕ್ಷಿಯಾಗಿದೆ.

ಈ ವಾದವೂ ಅಯುಕ್ತವಾಗಿದೆ.— "ಶ್ರುತಿಯಲ್ಲಿ ಸತ್ಯಪದವು ಅಶ್ರುತ ವಾದರೂ, ಶ್ರುತಿಪ್ರತಿಪಾದ್ಯವಾದ ಭೇದವು ಸತ್ಯವೆಂದೇ ಗ್ರಹಿಸಬೇಕು. ಇಲ್ಲ ವಾದರೆ ಮಿಥ್ಯಾಭೂತವಾದ ಭೇದವನ್ನು ಪ್ರತಿಪಾದಿಸುವ ಕಾರಣದಿಂದ, ಅದು ಪ್ರಮಾಣವೇ ಆಗಲಾರದು. ಅಬಾಧಿತವಾದ ಸತ್ಯವಾದ ಪ್ರಮೇಯವನ್ನು ಬೋಧಿ ಸುವುದರಿಂದಲ್ಲವೇ ವೇದವು 'ಪ್ರಮಾಣ'ವೆನಿಸುವುದು. ವೇದ ಬೋಧಿತವಾದ ಭೇದವು ಮಿಥ್ಯೆಯಾದರೆ. ವೇದವು ಹೇಗೆ ತಾನೇ ತತ್ವಾವೇದಕವಾದೀತು ? ಪ್ರಮಾ ಣವೆನಿಸೀತು ?

ಶ್ರುತಿಯಲ್ಲಿ ಭೇದವನ್ನು ಪ್ರತಿಪಾದಿಸುವಾಗ, ಭೇದವು ಸತ್ಯವೆಂದು ಪ್ರತಿ ಪಾದಿಸದ ಕಾರಣ, ಭೇದವು ಸತ್ಯವಲ್ಲವೆನ್ನುವುದಾದರೆ, ' ಏಕೇಮೇವಾದ್ವಿತೀಯಂ ಬ್ರಹ್ಮ ' ಎಂಬ ಶ್ರುತಿ ಪ್ರತಿಪಾದ್ಯವಾದ ಅದ್ವೈತವೂ ಪಾರಮಾರ್ಥಿಕವಾಗದಿರಲಿ. ಏಕೆಂದರೆ, ಆ ಶ್ರುತಿಯಲ್ಲಿಯೂ ಅದ್ವೈತವು ಸತ್ಯವೆಂದು ಪ್ರತಿಪಾದಿಸಲ್ಪಟ್ಟಿಲ್ಲವಷ್ಟೆ!

' ಅದ್ವೈತವು ಸತ್ಯ ' ವೆಂದು ಶ್ರುತಿಯು, ಸತ್ಯತ್ವವನ್ನು ಸಾಕ್ಷಾತ್ತಾಗಿ ಪ್ರತಿ ಪಾದಿಸದಿದ್ದರೂ ಉಪಕ್ರಮಾದಿ ಷಡ್ವಿಧತಾತ್ಪರ್ಯಲಿಂಗವು ಸತ್ಯತ್ವವನ್ನು ದೃಢೀ ಕರಿಸುವುದು. ಆದ್ದರಿಂದ ಅಲ್ಲಿ ' ಸತ್ಯ 'ಪದ ಶ್ರುತವಾಗದಿದ್ದರೂ ಯಾವ ಕೊರತೆ ಯಿಲ್ಲ. ಆದರೆ ಭೇದ ಶ್ರುತಿಗೆ ತಾತ್ಪರ್ಯಲಿಂಗದ ಬಲವಿಲ್ಲದಿರುವುದರಿಂದ. ಆ ಶ್ರುತಿ ಪ್ರತಿಪಾದ್ಯವಾದ ಭೇದವು ಸತ್ಯವಲ್ಲ".

ಈ ವಾದವೂ ಆಯುಕ್ತವಾಗಿದೆ –ಶ್ರುತಿಯಲ್ಲಿ ಷಡ್ವಿಧ ತಾತ್ಪರ್ಯಲಿಂಗಗಳನ್ನು ಗಮನಿಸುವಾಗ, ಅದ್ವೈತ ಆಪಾತತಃ ಕಂಡುಬರುವುದು. ಆದ್ದರಿಂದ ತಾತ್ಪರ್ಯ ಲಿಂಗಗಳು ಅದ್ವೈತಪರವೆನ್ನಬಹುದಾದರೂ, ಅದ್ವೈತದ ಸತ್ಯತ್ವವನ್ನು ಪ್ರತಿಪಾದಿಸುತ್ತಿಲ್ಲ. ಆರ್ಥಿಕವಾದ ಅದ್ವೈತ ಸತ್ಯತ್ವವು ಶಬ್ದಾರ್ಥವಲ್ಲವಷ್ಟೆ !

ಇದಲ್ಲದೇ ಭೇದದಲ್ಲಿಯೇ ಷಡ್ವಿಧ ತಾತ್ಪರ್ಯಲಿಂಗವಿದೆಯೆಂದು ಸುದೃಢವಾಗಿ ಮತ್ತು ಸುಸ್ಪಷ್ಟವಾಗಿ ನ್ಯಾಯಾಮೃತದಲ್ಲಿ ಪ್ರತಿಪಾದಿಸಿದ್ದೇವೆ. ವ್ಯಾವಹಾರಿಕ ಭೇದವು ಅಬಾಧ್ಯ(ಸತ್ಯ) ವೆಂದಾದರೆ ವಿಶ್ವದಲ್ಲಿ ಕಾಣುವ ಅನುಭವಸಿದ್ಧವಾದ ಭೇದವನ್ನು ನಾವು ದ್ವೈತಿಗಳು "ಪಾರಮಾರ್ಥಿಕ" ವೆನ್ನುತ್ತೇವೆ. ನೀವು (ಅದ್ವೈತವಾದಿಗಳು) ಅಬಾಧ್ಯವೇನ್ನುತ್ತೀರಿ. ಅಂತೂ ನೀವು ನಮ್ಮ ವಾದವನ್ನೇ ರೀತ್ಯಂತರದಿಂದ ಮಂಡಿಸಿದಂತಾಗುವುದು.

ಆದ್ದರಿಂದ ಪ್ರತ್ಯಕ್ಷಾನುಮಾನಾಗಮಗಳು ಭೇದಸಾಧನೆಯಲ್ಲಿ ವಿರೋಧಿಗಳಾ ಗಿರದೇ, ಪ್ರಮಾಣವೇ ಆಗಿರುವುದರಿಂದ, ಭೇದವು ಅತ್ಯಂತ ಪ್ರಾಮಾಣಿಕವಾಗಿದೆ. ಹೀಗೆ ಪ್ರತ್ಯಕ್ಷ ಮತ್ತು ಆಗಮಗಳ ಬೆಂಬಲವುಳ್ಳ ಪ್ರಬಲವಾದ ಯುಕ್ತಿಗಳಿಂದ ಭೇದಸತ್ಯತೆ ಹಾಗೂ ಅದರ ಅನಿವಾರ್ಯತೆಯನ್ನು ವ್ಯಾಸತೀರ್ಥರು ಪ್ರತಿಪಾದಿ ಸಿದ್ದಾರೆ.

# ಶ್ರೀವ್ಯಾಸತೀರ್ಥ ವಿರಚಿತ ನವರತ್ನ ಮಾಲೆ

## (ಒಂದು ಸಮಾಲೋಚನೆ)

---

ಡಾ॥ ಜಿ. ವರದರಾಜರಾವ್

ಶ್ರೀಮನ್ಮಧ್ವಮತೇ ಹರಿಃ ಪರತರಃಸತ್ಯಂ ಜಗತ್ತತ್ತ್ವತೋ
ಭೇದೋ ಜೀವಗಣಾ ಹರೇರನುಚರಾಃ ನೀಚೋಚ್ಚಭಾವಂ ಗತಾಃ
ಮುಕ್ತಿರ್ನೈಜ ಸುಖಾನು ಭೂತಿರಮಲಾ ಭಕ್ತಿಶ್ಚ ತತ್ಸಾಧನಂ
ಹ್ಯಕ್ಷಾದಿ ತ್ರಿತಯಂ ಪ್ರಮಾಣಮಖಿಲಾಮ್ನಾಯೈಕವೇದ್ಯೋ ಹರಿಃ

ಮಧ್ವಮತದ ಪ್ರಮುಖ ಪ್ರಮೇಯಗಳನ್ನು ತಿಳಿಸುವ ಈ ಪದ್ಯ ಈಗಾಗಲೇ ಸಾಕಷ್ಟು ಸುಪ್ರಸಿದ್ಧವಾಗಿದೆ. ಇದರಲ್ಲಿ 1) ಶ್ರೀ ಹರಿ ಸರ್ವೋತ್ತಮ 2) ಜಗತ್ತು ಪಾರಮಾರ್ಥಿಕ ಸತ್ಯ 3) ಪಂಚಭೇದವು ಪಾರಮಾರ್ಥಿಕ ಸತ್ಯ ಮತ್ತು ನಿತ್ಯ 4) ಜೀವಗಣಗಳು ಶ್ರೀಹರಿಯ ಅನುಚರರು (ಪ್ರತಿಬಿಂಬರು) 6)ನಿತ್ಯ ತಾರತಮ್ಯ ವುಳ್ಳವರು 6) ಸ್ವರೂಪಸುಖಾನುಭವವೇ ಮುಕ್ತಿ, 7) ನಿರ್ಮಲವಾದ ಭಕ್ತಿಯು ಮುಕ್ತಿಗೆ ಸಾಧನ, 7) ಪ್ರತ್ಯಕ್ಷ ಅನುಮಾನ, ಆಗಮಗಳು ಸಾಧಕ ಪ್ರಮಾಣಗಳು, 9) ಶ್ರೀ ಹರಿಯು ಆಗಮಮಾತ್ರ ವೇದ್ಯನು ಎಂಬ ದ್ವೈತ ಸಿದ್ಧಾಂತದ ಮುಖ್ಯ ಒಂಬತ್ತು ಪ್ರಮೇಯಗಳು ಅಡಕವಾಗಿರುವುದರಿಂದ ಇದಕ್ಕೆ "ನವರತ್ನ ಮಾಲೆ" ಯೆಂದು ಕರೆಯುವುದು ವಾಡಿಕೆ. (ಮೇಲಿನ ವಿವರಣೆಯನ್ನು ಆರ್. ಎಸ್. ಪಂಚಮುಖಿ ಅವರ ' ಕರ್ನಾಟಕದ ಹರಿದಾಸ ಸಾಹಿತ್ಯ' ಎಂಬ ಪುಸ್ತಕದಿಂದ ಆರಿಸಿಕೊಂಡಿದೆ. 1952, ಪುಟ98.)

ಕರ್ಣಾಟಕ ಭಕ್ತ ವಿಜಯದ ಕರ್ತೃಗಳಾದ ಬೇಲೂರು ಕೇಶವದಾಸರು, ಶ್ರೀವ್ಯಾಸರಾಯರು ಉತ್ತರ ಭಾರತದ ದಿಗ್ವಿಜಯ ಮಾಡಿಕೊಂಡು ದಕ್ಷಿಣದಲ್ಲಿರುವ ಕಾಂಚೀಪುರಕ್ಕೆ ಬಂದಾಗ ಅವರೊಡನೆ ಕೆಲವು ಪಂಡಿತರು ವಾದ ಮಾಡಲು ತೊಡಗಿ ಪರಾಜಿತರಾದರೆಂದೂ, ಆಗ ಶ್ರೀವ್ಯಾಸರಾಯರು ಆ ಪ್ರತಿವಾದಿಗಳ ಕೋರಿಕೆಯಂತೆ

ಮಧ್ವಮತದ ಸಾರಸರ್ವಸ್ವವನ್ನು ಒಳಗೊಂಡ ಈ ಪದ್ಯವನ್ನು ಕೂಡಲೇ ಹೇಳಿದ ರೆಂದೂ ತಿಳಿಸಿರುತ್ತಾರೆ (ಕರ್ಣಾಟಕ ಭಕ್ತ ವಿಜಯ, ಮೂರನೆಯ ಆವೃತ್ತಿ).

ಶ್ರೀ ಗುಂಡೂರಾಯರು ಬರೆದಿರುವ "ಶ್ರೀಮನ್ಮಧ್ವಮತ ತತ್ತ್ವ ಸುಧಾ" (1963, ಪುಟ 63) ಗ್ರಂಥದ ಪ್ರಕಾಶಕರಾದ ರಾಣ್ಯ ರಾಜಾರಾವ್ ಅವರು ತಮ್ಮ "ಸವಿನುಡಿ"ಯಲ್ಲಿ ಈ ರಚನೆಯ ಬಗ್ಗೆ ತಾವು ಕೇಳಿದ ಆಖ್ಯಾಯಿಕೆಯೊಂದನ್ನು ತಿಳಿಸಿರುವರು.

ಶ್ರೀವ್ಯಾಸರಾಯರು "ಶ್ರೀಶ್ರೀವಾದಿರಾಜ ಶ್ರೀಪಾದಂಗಳವರನ್ನು ಮತ್ತು ತಮ್ಮ ಇತರ ಶಿಷ್ಯರನ್ನು ಕುರಿತು ಸ್ವಸ್ವರೂಪವನ್ನು ತಿಳಿದುಕೊಳ್ಳಬೇಕೆಂಬ ಉದ್ದೇಶದಿಂದಲೂ ಮತ್ತು ಇತರರಿಗೆ ಬೋಧಿಸಬೇಕೆಂಬ ಅಪೇಕ್ಷೆಯಿಂದಲೂ, ಬುದ್ಧಿ ಪೂರ್ವಕವಾಗಿ ದತ್ತೂರ ಫಲವನ್ನು ಅಗಿದು ತಿಂದು ತಮ್ಮ ಬುದ್ಧಿಯನ್ನು ವಿವಶ ಮಾಡಿಕೊಂಡು, ಇಂಥಾ ಸಮಯದಲ್ಲಿ"ನಮ್ಮ ಮುಖದಿಂದ ಹೊರಡುವ ವಚನವನ್ನು ಬರೆದು ಉನ್ಮಾದ ನಿವೃತ್ತಿಯಾದ ನಂತರದಲ್ಲಿ ನಮಗೆ ತೋರಿಸಿರಿ" ಎಂದು ಆಜ್ಞೆ ಮಾಡಿ, ತಮ್ಮ ಉನ್ಮಾದ ಸಮಯದಲ್ಲಿ ತಮ್ಮ ಮುಖದಿಂದ ಹೊರ ಬಿದ್ದು ಅನಂತರ ತಮ್ಮ ಶಿಷ್ಯರಿಂದ ತೋರಿಸಿಲ್ಪಟ್ಟದ್ದು. ಮೇಲ್ಕಂಡ ಶ್ಲೋಕವನ್ನು ನೋಡಿದ ಮೇಲೆ, ಶಿಷ್ಯರುಗಳು "ಶ್ರೀಮದಾನಂದತೀರ್ಥರ ಆನಂದಕರವಾದ ಶಾಸ್ತ್ರವೆಂಬ ಸುತೀರ್ಥದಲ್ಲಿ ಮಗ್ನರಾದ ಸನ್ನೋಕ್ಷಾರ್ಹರು" ಎಂಬುದಾಗಿ ಸ್ತುತಿಸಿ ನಿರ್ಧರಿಸಿ ಸಂತೋಷಪಟ್ಟರು. (ಪ್ರಕಾಶಕರ ಸವಿನುಡಿ, 1984, ಪುಟ5)

ದಾವಣಗೆರೆಯ ದಿ. ಭೀಮರಾಯರು ಶ್ರೀವಾದಿರಾಜರ 'ಸ್ವಪ್ನಪದ'ದ ಒಂದನೆಯ ಪದ್ಯಕ್ಕೆ ವಿವರಣೆ ಬರೆಯುವಲ್ಲಿ ಮೇಲಿನ ಪ್ರಸಂಗವನ್ನೇ ಅಲ್ಪ ಸ್ವಲ್ಪ ಮಾರ್ಪಡಿಸಿ ಹೀಗೆ ನಿರೂಪಿಸಿರುತ್ತಾರೆ :

"ತಾವು (ಶ್ರೀವ್ಯಾಸರಾಯರು) ಆನಿಷಿದ್ಧ ಬೇರಿನ ರಸವಿಶೇಷವನ್ನು ಪಾನ ಮಾಡಿ ಪರವಶರಾಗುವುದಾಗಿಯೂ, ಆಗ ತಮ್ಮ ಮುಖದಿಂದ ಹೊರಡುವ ಮಾತು ಗಳನ್ನು ಬರೆದಿಡಬೇಕಾಗಿಯೂ ಶ್ರೀಚಂದ್ರಿಕಾಚಾರ್ಯರು ತಮ್ಮ ಶಿಷ್ಯರಿಗೆ ಹೇಳಿದರಂತೆ. ರಸಸೇವನೆಯಿಂದ ಆ ಅವಸ್ಥೆಯನ್ನು ಹೊಂದಿದ ಅವರ ಮುಖದಿಂದ "ಶ್ರೀಮನ್ಮಧ್ವಮತೇ ಹರಿಃ ಪರತರಃ . ಅಖಿಲಾಮ್ನಾಯೈಕ ವೇದ್ಯೋ ಹರಿಃ" ಎಂಬ ಸದ್ವೈಷ್ಣವ ಮತ ಸಿದ್ಧಾಂತ ಸಂಗ್ರಾಹಕ ಶ್ಲೋಕವು ಉಚ್ಚರಿತವಾಯ್ತಂತೆ. ಇತ್ಯಾದಿ ನಿದರ್ಶನಗಳ ವಿಮರ್ಶೆಯು ಅವಸ್ಥಾ ವಿಶೇಷಗಳ ಪ್ರಭಾವಕ್ಕೊಳಗಾಗಿ ವ್ಯತ್ಯಸ್ತವಾಗದ ಜ್ಞಾನಾನುಭವಗಳು ದೇವಸ್ವರೂಪಭೂತರೆಂದು ಸಾಧಿಸುತ್ತದೆ. (ಶ್ರೀವಾದಿರಾಜ ವಿರಚಿತ "ಸ್ವಪ್ನಪದ"ದ ವ್ಯಾಖ್ಯಾನ, 1974, ಪುಟ 4.)

ದ್ವೈತ ಸಿದ್ಧಾಂತದ ಗ್ರಂಥಗಳನ್ನು ವಸ್ತುನಿಷ್ಠ ದೃಷ್ಟಿಯಿಂದ ಪರಿಶೀಲಿಸಿರುವ

ತಲೂರು ವೇಂಕಟರಾಯರು ಪ್ರಕೃತ ರಚನೆ "ವಿದ್ಯಾಭೂಷಣ ಬಲದೇವರೆಂಬ ಮಾಧ್ವ ಚಾರ್ಯರ ಬಂಗಾಲದ ಶಿಷ್ಯರು ತಮ್ಮ 'ಪ್ರಮೇಯ ರತ್ನಾವಳಿ' ಎಂಬ ಗ್ರಂಥದಲ್ಲ ಇವು ಒಂಭತ್ತು ಮಧ್ವಾಚಾರ್ಯರ ಸಿದ್ಧಾಂತಗಳೆಂದು ಹೇಳಿ ಇವನ್ನು ತಮ್ಮ ಗ್ರಂಥ ದಲ್ಲಿ ಸಪ್ರಮಾಣವಾಗಿ ಸಮರ್ಥಿಸಿರುವರು" ಎಂದು ಹೇಳುವುದು ಅತ್ಯಂತ ಸ್ತುತ್ಯ ವಾದುವೇ ಸರಿ. (ಶ್ರೀಮಧ್ವಾಚಾರ್ಯರ ಮೂಲ ಸಿದ್ಧಾಂತ, 1946, ಪುಟ 18) ಇದೇ ಸಂಗತಿಯನ್ನು ಅವರು ತಮ್ಮ "ಮಧ್ವಾಚಾರ್ಯರ ಪೂರ್ಣ ಬ್ರಹ್ಮವಾದ" ಎಂಬ ಗ್ರಂಥದಲ್ಲಿಯೂ ವಿವರವಾಗಿ ಪರಿಶೀಲಿಸಿರುತ್ತಾರೆ. (ಶ್ರೀಮಧ್ವಾಚಾರ್ಯರ ಪೂರ್ಣ ಬ್ರಹ್ಮವಾದ, 1960, ಪುಟ 12)

ಬಂಗಾಳದ ಈ ಬಲದೇವ ವಿದ್ಯಾಭೂಷಣ (ಕ್ರಿ .ಶ. 1720-90) ನನ್ನು ಕುರಿತು ವಿಸ್ತಾರವಾಗಿ ಪರಿಶೀಲಿಸಿರುವ ಡಾ.ಬಿ.ಎನ್.ಕೆ. ಶರ್ಮ ಅವರು ದ್ವೈತ ಸಿದ್ಧಾಂತವನ್ನು ಕುರಿತು ತಮ್ಮ ಉದ್ಗ್ರಂಥದಲ್ಲಿ (A History of the Dvaita School of Vedanta and Literature, Vel, II, 1961, PP. 333–334) ಈ ರಚನೆಯು ಒಗ್ಗೆ ಅನೇಕ ಅಂಶಗಳನ್ನು ಪರಿಚಯ ಮಾಡಿ ಕೊಟ್ಟಿರುತ್ತಾರೆ. ಬಲದೇವನು ತನ್ನ "ಪ್ರಮೇಯ ರತ್ನಾವಳಿ"ಯಲ್ಲಿ ಉದ್ಧರಿಸಿ ರುವ ಈ ಪದ್ಯದ ಪಾಠ ಹೀಗಿದೆ.

ಶ್ರೀಮನ್ಮಧ್ವಮತೇ ಹರಿಃ ಪರತರಃ ಸತ್ಯಂ ಜಗತ್ತತ್ವತೋ
ಭಿನ್ನಾ ಜೀವಗಣಾ ಹರೇರನುಚರಾ ನೀಚೋಚ್ಚ ಭಾವಂ ಗತಾಃ ।
ಮುಕ್ತಿ ರ್ನೈಜ ಸುಖಾನುಭೂತಿರಮಲಾ ಭಕ್ತಿಶ್ಚ ತತ್ಸಾಧನಂ
ಹ್ಯಕ್ಷಾದಿ ತ್ರಿತಯಂ ಪ್ರಮಾಣಮಖಿಲಾಮ್ನಾಯೈಕ ವೇದ್ಯೋಹರಿಃ ॥

ಇದನ್ನೇ ಹೋಲುವಂತಿರುವ ಚೈತನ್ಯ ಪಂಥದ ಪ್ರಮೇಯಗಳನ್ನು ತಿಳಿ ಸುವ ರಚನೆಯೊಂದನ್ನು ಇಲ್ಲಿ ಉದಾಹರಿಸುವುದು ತುಂಬ ಅಮೂಲ್ಯವಾದುದು

ಶ್ರೀಮಧ್ವಃ ಪ್ರಾಹ ವಿಷ್ಣುಂ ಪರತಮಮಖಿಲಾಮ್ನಾಯೈಕವೇದ್ಯಂ ಚವಿಶ್ವಂ
ಸತ್ಯಂ ಭೇದಂಚ ಜೀವಾನ್ ಹರಿಚರಣಜುಷಸ್ತಾರತಮ್ಯಂ ಚ ತೇಷಾಮ್
ಮೋಕ್ಷಂ ವಿಷ್ಣ್ವಂಘ್ರಿಲಾಭಂ ತದಮಲಭಜನಂ ತಸ್ಯ ಹೇತುಂ ಪ್ರಮಾಣಂ
ಪ್ರತ್ಯಕ್ಷಾದಿತ್ರಯಂ ಚೇತ್ಯುಪದಿಶತಿ ಹರಿಃ ಕೃಷ್ಣ ಚೈತನ್ಯ ಚಂದ್ರಃ ॥

ಈ ಪದ್ಯ ಸ್ರಗ್ಧರಾವೃತ್ತದಲ್ಲಿದೆ. ಇದರಲ್ಲಿ ಕ್ರಮವಾಗಿ 1) ವಿಷ್ಣು ಸರ್ವೋತ್ತಮ, 2) ಅವನು ಸಮಸ್ತ ವೇದೈಕ ವೇದ್ಯ, 3) ವಿಶ್ವವು ಸತ್ಯ, 4) ಭೇದವೂ ಸತ್ಯ,

5) ಜೀವರು ಹರಿಯ ಚರಣಾಸಕ್ತರು, 6) ಅವರಲ್ಲಿ ತಾರತಮ್ಯವುಂಟು, 7) ವಿಷ್ಣು ವಿನ ಚರಣ ಲಾಭವೇ ಮೋಕ್ಷ, 8) ಪವಿತ್ರ ಭಜನೆಯೆ ಅದಕ್ಕೆ ಕಾರಣ, 9) ಪ್ರತ್ಯಕ್ಷಾದಿತ್ರಯಗಳೇ ಪ್ರಮಾಣಗಳು ಎಂಬ ನವ ಪ್ರಮೇಯಂಗಳು ಉಕ್ತವಾಗಿವೆ.

ಈ ಪದ್ಯವನ್ನು ಉದಾಹರಿಸಿದ ಬಳಿಕ ಬಲದೇವ ವಿದ್ಯಾಭೂಷಣನು "ಆನಂದ ತೀರ್ಥೈಃ ರಚಿತಾನಿ ಯಸ್ಯಾಂ ಪ್ರಮೇಯ ರತ್ನಾನಿ ನವೈವ ಸಂತಿ । ಪ್ರಮೇಯ ರತ್ನಾವಲಿ ರಾದರೇಣ ಪ್ರಧೀಭಿರೇಷಾ ಹೃದಯೇನಿಧೇಯಾ ॥" ಎಂದು ಹೇಳಿರುವುದರ ಕಡೆಗೂ ಡಾ॥ ಬಿ.ಎನ್.ಕೆ. ಶರ್ಮ ಅವರು ನಮ್ಮ ಗಮನವನ್ನು ಸೆಳೆದಿರುತ್ತಾರೆ.

ಈ ಎಲ್ಲ ಅಂಶಗಳನ್ನು ಗಮನಿಸಿದ್ದೇ ಆದರೆ ಶ್ರೀವ್ಯಾಸರಾಜರು ಉತ್ತರ ಭಾರತದಲ್ಲಿ ತಮ್ಮ ಧರ್ಮ ಪ್ರಚಾರ ಕಾರ್ಯವನ್ನು ಕೈಗೊಂಡ ಸಂದರ್ಭದಲ್ಲಿ, ತಮ್ಮ ಪ್ರತಿವಾದಿಗಳೊಂದಿಗೆ ವಾದವನ್ನು ಮಾಡಿ, ದ್ವೈತ ಸಿದ್ಧಾಂತದ ಪ್ರಮುಖ ಪ್ರಮೇಯಂಗಳನ್ನು ಒಳಗೊಂಡಸೂತ್ರ ಪ್ರಾಯವಾದ ಈ ಪದ್ಯವನ್ನು ರಚಿಸಿರಬಹುದೆಂದು ಊಹಿಸುವುದೇ, ಇತರ ಕಾರಣಗಳಿಗಿಂತ ಹೆಚ್ಚು ಸಮಂಜಸವೆನಿಸುತ್ತದೆ.

000

---

**ಹರಿ ಸರ್ವೋತ್ತಮ**

ಉಕ್ಕುವ ತುಪ್ಪಕ್ಕೆ ಕೈಯಿಕ್ಕುವೆ ನಾನು । ಚಕ್ರಧರ ಪರಮಾತ್ಮನೊಬ್ಬನಲ್ಲದಿಲ್ಲವೆಂದು ॥
ಶಕ್ತಿಶೂನ್ಯನಿವನೆಂದು ಸಂಶಯ ಪಡಬೇಕೆ । ಕೃತ್ಯದಿಂದ ನೋಡೆ ಶ್ರೀ ಕೃಷ್ಣನೊಬ್ಬನೆ ।
ಹತ್ತಾರು ಸಾಸಿರನೂರು ಗೊ । ಪಸ್ತ್ರೀಯರನ್ನು ಆಳಿ । ನಿತ್ಯಬ್ರಹ್ಮಚಾರಿಯನಿಪ ನಿಷ್ಕಳಂಕ ಮೊಬ್ಬನೆಂದು ॥

---

# ಶ್ರೀ ಮದ್ವ್ಯಾಸರಾಜರ ಕೃತಿಗಳಲ್ಲಿ ಜೀವನ ಪರಿಚಯ

ಹಂಡೆ ಶ್ರೀ ಗುರುವೇದವ್ಯಾಸಾಚಾರ್ಯ

ಶ್ರೀ ಮದ್ವ್ಯಾಸರಾಜ ಗುರುಸಾರ್ವಭೌಮರು, ಚಂದ್ರಿಕಾ ನ್ಯಾಯಾಮೃತ ತರ್ಕತಾಂಡವಾದಿ ಉದ್ಗ್ರಂಥಕಾರರಾಗಿ ವಿದ್ವತ್ಪ್ರಪಂಚದವರಿಗೆ ಮನೆಮಾತಾಗಿರುವ ಮಹಾವಿದ್ವನ್ಮಣಿಗಳು. ಅಂತೆಯೇ ನಲ್ನುಡಿ ನನ್ನುಡಿ ಚೆನ್ನುಡಿ ಹೊನ್ನುಡಿ ಕನ್ನಡ ಕುಲಕೋಟಿಯ ಪ್ರಾಣಸ್ಥಾನಾಪನ್ನನುಡಿ ಕನ್ನಡದಲ್ಲಿಯೂ ಶ್ರೀಹರಿಗುಣಗಾನ ಪೂರಿತ ಕೃತಿಗಳನ್ನು ಚಿತ್ರಿಸಿ ಶುದ್ಧಭಾಗವತಜನರ ಚಿತ್ತ ಶ್ರೀಹರಿಭಕ್ತಿಯಲ್ಲಿ ಮುತ್ತಣೆಯನ್ನು ಹೊಂದುವಂತೆ ಸರಳ ಸುಂದರ ತತ್ವಸಾರಗಳೆನಿಸಿದ ಪದಗಳನ್ನು ರಚಿಸಿ ಸುಜನರಾದ ಭಾವುಕರಿಗೆ ಮಹದುಪಕಾರ ಮಾಡಿದ್ದಾರೆ.

ಚಂದ್ರಿಕಾಚಾರ್ಯರ ರಚನೆಗಳಲ್ಲಿ ಅಂದಿನಕಾಲದ ಜನಜೀವನದವರಿಗೆ ಕನ್ನಡ ದಲ್ಲಿ ಕನ್ನಡಿ ಹಿಡಿದಂಥ ಕೃತಿಗಳು ಬಹಳ ವಿರಳ. ದೊರಕಿರುವ ಅವರ ರಚನೆಗಳಲ್ಲಿ ಭಗವದ್ಗುಣಗಾನ ಪದ್ಯಗಳೇ ಬಹಳ. ಎಲ್ಲೋ ಒಂದೆರಡು ಜನಜಾಗೃತಿಗಾಗಿ ರಚಿ ಸಿದ ದೇವರನಾಮಗಳು ದೊರೆಯುಬಹುದಾದರೂ ಅಂಥವುಗಳಲ್ಲೂ ಹರಿಸ್ತುತಿಯನ್ನು ಹೆಚ್ಚಾಗಿ ರಚಿಸಿದ್ದಾರೆ ಅಂಥವುಗಳಲ್ಲಿ ಒಂದು. ಈ ಕೆಳಗಿನ ದೇವರನಾಮ.

**ರಾಗ ॥ ಅಠಾಣ ॥ ಆದಿತಾಳ ॥**

ಛೀ ಛೀ ಮನವೆ ನಾಚದ ತನುವೆ । ನೀಚವೃತ್ತಿಯ ಬಿಟ್ಟು ನೆನೆಕಂಡ್ಯ ಹರಿಯ ॥ಪ॥ ಕಿವಿ ಗೊಟ್ಟು ಗಂಟೆಯ ನಾದಕ್ಕೆ ಹುಲ್ಲೆಯ । ನಿವರು ಸಿಕ್ಕಿಬಿದ್ದುದನರಿಯೋ। ನವಯೌವ್ವನೆಯರ ಕೋಕಿಲಾಲಾಪದ । ಸವಿ ನುಡಿ ಕೇಳದೆ ಅಚ್ಯುತಕಥೆ ಕೇಳೋ ॥ ೧ ॥ ಪೆಣ್ಣೆಂದು ಭ್ರಮಿಸಿ ಪತಂಗ ದೀಪದಿ ಬಿದ್ದು । ಉಣ್ಣದುರಿವುದು ನೀ ಕಂಡು ಕಂಡರಿಯೋ । ಬಣ್ಣದ ಅಬಲೆಯರ ರೂಪಿಗೆ ಮರುಳಾಗಿ ಮಣ್ಣು ತಿನ್ನದೆ ಮಾಧವನ್ನ ನೀ ಸ್ಮರಿಸೋ ॥ ಗಾಣದ ತುದಿಯ ಮಾಂಸವ ಮೆಲ್ಲುತ ಮತ್ಸ್ಯ । ಪ್ರಾಣವಬಿಡುವದಂಗನೆಯರಧರವ । ಮಾಣದೆ ಬಯಸಿ ಕೆಡದೆ ಶ್ರೀಮನ್ನಾರಾಯಣ ನಾಮಾಮೃತ ಸವಿ ಎಲೆ ಮನವೆ ॥೨॥ ಅಳಿಯೆದ್ದು ಕರಿ ಕರಿ

ಣಿಯ ಸ್ಪರುಶಕೆ ಪೋಗಿ । ಕುಳಿಯಬಿದ್ದುದು ನೀ ಕಂಡು ಕಂಡರಿಯೊ । ಲಲನೆಯರಾಲಿಂಗನ ಕೆಳಸದೆ ಸಿರಿ । ಲಲನೇಶನಂಘ್ರಿಯನಪ್ಪಿಕೋ ಮನವೆ ॥೪॥ ಅಳಿಪರಿಮಳಕ್ಕಾಗಿ ಸಳಿನದೊಳಗೆ ಸಿಕ್ಕಿ । ಅಳಿವಂಶಂಗನೆಯರ ಮೃಗಂಧವ ಬಯಸಿ । ಬಳಲದೆ ವರದ ಶ್ರೀಕೃಷ್ಣನಂಘ್ರಿಯೊಳಿಪ್ಪ । ತುಳಸಿಯನಾಘ್ರಾಣಿಸು ಕಂಡ್ಯ ಮನವೆ ॥೫॥

(ಗಾಣ ಅಂದರೆ ಗಾಳ ಎಂಬರ್ಥದಲ್ಲಿ ಹೇಳಿರಬಹುದು)

ಇದು ಯಾವ ಕಾಲಕ್ಕೂ ಎಲ್ಲ ವಿಧದ ಜನಾಂಗದವರಿಗೂ ಬೋಧೆ, ಹೆಣ್ಣು ಮಕ್ಕಳ ಬಾಳನ್ನು ಹಾಳುಮಾಡುವಂತೆ ಮಾನವನ್ನು ಹರಿಯಿಸುವ ಜನರು ಎಲ್ಲ ಕಾಲದಲ್ಲೂ ಇದ್ದೇ ಇರುತ್ತಾರೆ. ಸರಾಸರಿಯಲ್ಲಿ ವ್ಯತ್ಯಾಸವಾಗಬಹುದು ಅಷ್ಟೆ ಮನಸ್ಸನ್ನು ಹತೋಟಿಯಲ್ಲಿ ಇಟ್ಟುಕೊಳ್ಳಲು ಇಲ್ಲಿ ಎಚ್ಚರಿಕೆ ಇದೆ. ಅಲ್ಲದೆ ಇಂಥ ಪದಗಳನ್ನು ತಮ್ಮ ತಮ್ಮ ಮನಸ್ಸಿಗೂ ಎಚ್ಚರಿಕೆ ಕೊಟ್ಟು ಕೊಳ್ಳಲು ರಚಿಸು ವಿಕೆಯೂ ಇದೆ. ಹೆಣ್ಣುಮಕ್ಕಳನ್ನು ಹೇಯವಾಗಿ ಕಾಣುವ ಉದ್ದೇಶ ಇಲ್ಲಿಲ್ಲ ಜನ ಜೀವವವು ಪಾವನವಾಗಲು ಇಂದ್ರಿಯ ನಿಗ್ರಹ ಶಕ್ತಿ ಅವಶ್ಯ. ಇಂದ್ರಿಯ ನಿಗ್ರಹಕ್ಕೂಶ್ರೀಹರಿದಯೆ ಅಗತ್ಯ. ಶ್ರೀಹರಿಸ್ಮರಣೆಯೇ ಸುಲಭೋಪಾಯ. ಸ್ಮರಣೆಯೂ ಶ್ರೀ ಹರಿ ದಯೆಯಿಂದಲೇ ಲಭ್ಯ. ಅದಕ್ಕಾಗಿ ಅವನಿಗೇ ಕೃತಿಯನ್ನೂ ಸಮರ್ಪಿಸಿದ್ದಾರೆ. "ಸಿರಿಕೃಷ್ಣ" ಇವರ ಮುದ್ರಿಕೆ ಅಥವಾ ಅಂಕಿತ "ಯತ್ಕರೋಷಿ ಯದಶ್ನಾಸಿ ಯಜ್ಜುಹೋಷಿ ದದಾಸಿಯತ್ । ಯತ್ತಪಸ್ಯಸಿ ಕೌಂತೇಯ ತತ್ಕುರುಷ್ವಮದರ್ಪಣಮ್ ॥" ಎಂಬಂತೆ ಮಾಡಬೇಕಾದ್ದನ್ನೇ ಮಾಡಿ ಮಾಡಿದ್ದನ್ನೆಲ್ಲಾ ಶ್ರೀಹರಿಗೆ ಸಮರ್ಪಿಸಬೇಕೆಂದು ಶಾಸ್ತ್ರ. ಮಾಡಬೇಕಾದ ಕೆಲಸಗಳಲ್ಲಿ ಸಮಾಜ ಕಲ್ಯಾಣ ಮುಖ್ಯ. ಜನಜಾಗೃತಿ ಉಂಟಾದರೆ ಕಲ್ಯಾಣ- ಅದಕ್ಕಾಗಿ ಜನರನ್ನು ಎಚ್ಚರಿಸುತ್ತ ಎಚ್ಚರಿಸಲು ರಚಿಸಿದ ಹಾಡನ್ನೂ ಅಚ್ಯುತನ ಶ್ರೀಕೃಷ್ಣನ ಸ್ಮರಣಪೂರ್ವಕ ಶ್ರೀಕೃಷ್ಣನಿಗರ್ಪಿಸಿದ್ದಾರೆ.

ಇನ್ನೊಂದು ಜಾಗ್ರುತಿ ಕೃತಿರೀತಿ ಹೀಗಿದೆ- ಶ್ರೀ 'ಕಾವ್ಯಪ್ರೇಮಿ' ಎಂಬುವರು ಸಂಗ್ರಹಿಸಿ ಪ್ರಕಟಿಸಿಲ್ಪಟ್ಟ ಹೊತ್ತಿಗೆಯಲ್ಲಿ ಈ ಜೀವನ ಪಾವನ ಮಾರ್ಗಕ್ರಮಣ ಬುತ್ತಿಯ ಒಂದು ತುತ್ತು ಇಲ್ಲಿದೆ. ಅಥವಾ ಸಂಸಾರಾರಣ್ಯದಲ್ಲಿನ ಘೋರ ಮೃಗಗಳ ಬಾಯಿಗೆ ತುತ್ತಾಗಿ ಕುತ್ತಿಗೆಗೊಳಗಾಗದಂತೆ ಉಪಾಯ ಬಿತ್ತರಿಸಿದ್ದಾರೆ, ಎತ್ತರಕ್ಕೇರಿದವರು ಎಂದರೆ ಗರ್ತದಲ್ಲಿ ಬಿದ್ದವರನ್ನು ಮೇಲೆತ್ತುವ ಕರುಣೆಗಳಾಗಿರುತ್ತಾರೆ ಅಂಥ ಲೋಕೋಪಕಾರಿಗಳಲ್ಲಿ ಖ್ಯಾತರಾದ ನಮ್ಮ ಶ್ರೀವ್ಯಾಸರಾಜರೆಂಬ ಸಂತಶ್ರೇಷ್ಠರ ಕೃತಿಗಳಲ್ಲಿ ಇದೂ ಒಂದು ಕೃತಿರತ್ನ. ಸಂತೆಯ ಕೂಗಲ್ಲ, ಬರಿಕಂತೆಯ ಬೊಂತೆಯಲ್ಲ, ಸಾಧು ಬೋಧೆ ವೇದ ಸದೃಶವಲ್ಲದೆ ಶಿಷ್ಯೋತ್ತಮ ಶ್ರೀಪುರಂದರ ದಾಸಾರ್ಯರ ದೇವರ ನಾಮಗಳನ್ನೇ 'ಪುರಂದರೋಪನಿಷತ್' 'ಇವರಂದ ಮಾತುಗಳು ವೇದಾರ್ಥಸಾರಗಳು' ಎಂಬುದಾಗಿ ಸಾರಿದ ಶ್ರೀವ್ಯಾಸರಾಜರ 'ಕೃತಿಗಳು

ವೇದೋಪನಿಷತ್ಸಾರ ಸರ್ವಸ್ವಗಳಲ್ಲವೇ ? ಅಹಂಕಾರವೆಂಬ ಪರಮ ಶತ್ರುವನ್ನು ಬಡಿದೋಡಿಸುವ ಬಲಪಡೆದವನು ಮಾತ್ರ ಧನ್ಯಬಾಳು ಬಾಳುತ್ತಾನೆ ಅದಕ್ಕಾಗಿ ಎಚ್ಚರಿಸುತ್ತಾರೆ.

### ರಾಗ ಕಾಂಬೋಧಿ ॥ ಝಂಪೆತಾಳ

ಬೀಗದಿರು ಬೀಗದಿರು ಎಲೆ ಮಾನವ ॥ಪ॥ ಧಿಗಿ ಧಿಗಿ ಧಿಗಿ ಎನುತ ನಿನಗೇಕೆ ಗರ್ವ ॥ಅ॥ಪ॥
ವಿರಕ್ತಿಯಲ್ಲಿ ಹನುಮನೆ ವಿವೇಕದಲ್ಲಿ ವಸಿಷ್ಠನೆ । ಶೂರತನದಲಿ ಶಂತನುತನಯನೇನೋ ॥
ಸ್ವರದಲ್ಲಿ ತುಂಬುರನೆ ಗೀತದಲಿ ನಾರದನೆ ಪರಾಶರ ಮುನಿಯೆ ವ್ರತತಿಪಟ್ಟದಲಿ ॥೧॥
ಚೆಲುವಿನಲಿ ರಾಮನೆ ಸತ್ಯದಿ ಹರಿಶ್ಚಂದ್ರನೆ ಛಲದಲಿ ಋಷಿ ವಿಶ್ವಾಮಿತ್ರನೇನೋ ॥ ಇತ್ಯಾದಿ.

ಹೀಗೆ ನೂರಾರು ಕೃತಿಗಳನ್ನು ಅಚ್ಚಗನ್ನಡದಲ್ಲಿ ರಚಿಸಿ ಸ್ವಚ್ಛವಾಗಿ ಸರಳ ಸುಂದರವಾಗಿ ರಚಿಸಿದ ಹರಿದಾಸರಲ್ಲೂ ಕನ್ನಡದ ಜೀವನಾಡಿಮಿಡಿದ ಪುಣ್ಯವಂತರು ಶ್ರೀವ್ಯಾಸರಾಜರನ್ನೇ ಪ್ರಥಮ ಗೌರವದಿಂದ ಗೌರವಿಸುತ್ತಾರೆ. ಶ್ರೀವ್ಯಾಸತೀರ್ಥರು ತಮ್ಮ ಜೀವನ ಪರಿಚಯವನ್ನು ತಮ್ಮ ಕೃತಿಗಳಲ್ಲಿ ಸಾಕ್ಷಾತ್ತಾಗಿ ಪರಿಚಯಿಸಿ ಕೊಂಡಂತಿಲ್ಲ. ಅಸ್ಮದಾದಿಗಳ ಜೀವನ ಸಾರ್ಥಕವಾಗಲು ಮಾರ್ಗ ತೋರಿದ್ದಾರೆ. ಹೀಗೆ ಸಂಸ್ಕೃತ ಕನ್ನಡ ಭಾಷೆಗಳೆರಡಕ್ಕೂ ಅಲಂಕಾರ ಮಾಡಿದ್ದಾರೆ ಮಹಾನು ಭಾವರು ತೆಲುಗಿನಲ್ಲೂ ರಚಿಸಿರುವರಂತೆ ಆದರೆ ಇನ್ನೂ ಉಪಲಬ್ಧವಿದ್ದಂತಿಲ್ಲ. ಈ ಲೇಖನ ಶ್ರೀವ್ಯಾಸರಾಜರ ಕನ್ನಡ ಕೃತಿಗಳ ಮಹತ್ವಸೂಚಿಯಲ್ಲಿ ಒಂದು ಹೆಜ್ಜೆ ಮಾತ್ರ.

---

### ನೀನೇ ದಯಮಾಡಿ ಸಲಹೊ

ಸ್ನಾನಮಾಡಿ ನಿನ್ನ ಸಮನಿಸುವೆನೆಂದರೆ । ಸ್ನಾನ ಮಾಡದೆ ಕಪ್ಪೆ ಸರ್ವಕಾಲ ದಲಿ । ಜಪವ ಮಾಡಿ ನಿನ್ನ ಸಮನಿಸುವೆನೆಂದರೆ । ಜಪದಲ್ಲಿ ಮನಸ್ಸು ಎನ್ನಾಧೀ । ನವೇನಯ್ಯಾ॥
ಉಪವಾಸವೆ ನಿನ್ನ ಸಾಧನವೆಂದರೆ । ಉಪವಾಸವಿರದೆ ಆ ಉರಗ ಸರ್ವಕಾಲದಲಿ
ನಿನ್ನ ಸನ್ಯಾಸವೇ ಸಾಧನವೆಂದರೆ । ಸನ್ಯಾಸವಿದೇನಯ್ಯಾ ಆ ರಾವಣಗೆ ॥

ವ್ಯಾಸತೀರ್ಥರು.

---

# ಶ್ರೀವ್ಯಾಸರಾಜರ 'ವಿಶೇಷ' ಪ್ರತಿಪಾದನೆ

ಡಾ। ಸಿ. ಹೆಚ್. ಶ್ರೀನಿವಾಸಮೂರ್ತಿ

ಭಾರತೀಯ ತತ್ವಶಾಸ್ತ್ರದಲ್ಲಿ ದ್ರವ್ಯ ಮತ್ತು ಗುಣಗಳಿಗೆ ಸಂಬಂಧಿಸಿದ ವಿಚಾರವು ಪ್ರಮುಖ ಸ್ಥಾನವನ್ನು ಪಡೆದಿದೆ. ಈ ಎರಡೂ ಪದಾರ್ಥಗಳಿಗೆ ಸಂಬಂಧಿಸಿದ ಪ್ರಶ್ನೆಯೊಂದು ಬಹಳ ಪ್ರಾಚೀನ ಕಾಲದಿಂದ ಚಿಂತಕರ ಗಮನವನ್ನು ಸೆಳೆದಿದೆ. ದ್ರವ್ಯ ಮತ್ತು ಗುಣಗಳು ಭಿನ್ನವೇ ? ಅಥವಾ ಅಭಿನ್ನವೇ ? ಅಥವಾ ಭಿನ್ನಾಭಿನ್ನವೇ ? ಇದೇ ಆ ಪ್ರಶ್ನೆ. ಈ ಮೂರು ಕಲ್ಪನೆಗಳಲ್ಲಿ ಯಾವ ಒಂದು ಕಲ್ಪನೆಯನ್ನೂ ಅಂಗೀಕರಿಸಲಾಗುವುದಿಲ್ಲ. ಏಕೆಂದರೆ, ದ್ರವ್ಯ ಮತ್ತು ಗುಣಗಳ ನಡುವೆ ಭೇದವಿದೆ ಎನ್ನುವ ಪಕ್ಷದಲ್ಲಿ ಅನವಸ್ಥಾ ಮೊದಲಾದ ದೋಷಗಳಿವೆ. ಅವುಗಳು ಅಭಿನ್ನ ಎನ್ನುವ ಪಕ್ಷವೂ ದೋಷಗ್ರಸ್ತವೇ ಆಗಿದೆ. ಉದಾಹರಣೆಗೆ, ದ್ರವ್ಯ ಮತ್ತು ಗುಣಗಳು ಅಭಿನ್ನವಾದರೆ ದ್ರವ್ಯ ಮತ್ತು ಗುಣಶಬ್ದಗಳು ಏಕೆ ಪರ್ಯಾಯ ಶಬ್ದಗಳಲ್ಲ ಎನ್ನುವ ಪ್ರಶ್ನೆಗೆ ಉತ್ತರವಿಲ್ಲ. ಭೇದ ಮತ್ತು ಅಭೇದಗಳು ಪರಸ್ಪರ ವಿರುದ್ಧವಾದುದರಿಂದ ಮೂರನೆಯ ಪಕ್ಷವೂ ಸರಿಯಿಲ್ಲ.

ಆಚಾರ್ಯ ಮಧ್ವರನ್ನು ಬಿಟ್ಟು ಎಲ್ಲ ದಾರ್ಶನಿಕರೂ ಮೇಲೆ ವಿವರಿಸಿದ ಪಕ್ಷಗಳಲ್ಲಿ ಯಾವುದಾದರೂ ಒಂದನ್ನು ಅಂಗೀಕರಿಸಿದ್ದಾರೆ. ಆದ್ದರಿಂದ ಈ ದಾರ್ಶನಿಕರಿಗೆ ಮೇಲೆ ವಿವರಿಸಿದ ಪ್ರಶ್ನೆಗೆ ಸಮರ್ಪಕವಾದ ಉತ್ತರವನ್ನು ಕೊಡಲು ಸಾಧ್ಯವಾಗಿಲ್ಲ.

ಶ್ರೀಮಧ್ವಾಚಾರ್ಯರ ದರ್ಶನವು ಈ ಪ್ರಶ್ನೆಗೆ ಹೊಸ ಉತ್ತರವನ್ನು ಕೊಟ್ಟಿದೆ. ದ್ರವ್ಯ ಮತ್ತು ಗುಣಗಳಿಗೆ ಅಭೇದವಿದೆಯೆಂದು ಈ ದರ್ಶನವು ಅಂಗೀಕರಿಸಿದೆ. ಅಭೇದ ಪಕ್ಷದಲ್ಲಿ ಇರುವ ದೋಷಗಳ ಬಗ್ಗೆ ಈ ದರ್ಶನವು ಜಾಗರೂಕವಾಗಿದೆ. ಈ ದೋಷಗಳ ಪರಿಹಾರಕ್ಕಾಗಿ ತನ್ನ ವಿಚಾರವನ್ನು ಮುಂದುವರಿಸಿದ ಈ ದರ್ಶನವು ಅಭೇದದ ಜೊತೆಯೇ ಅಭೇದ ಪಕ್ಷದ ದೋಷಗಳನ್ನು ಪರಿಹರಿಸುವ ಅಂಶವೊಂದು ಪದಾರ್ಥಗಳಲ್ಲಿ ಇರುವುದೆಂದು ಗುರುತಿಸಿದೆ. ಪ್ರಮಾಣಾನುಗುಣವಾಗಿ ಈ ಅಂಶಕ್ಕೆ 'ವಿಶೇಷ' ಎನ್ನುವ ಹೆಸರನ್ನು ಅಂಗೀಕರಿಸಿದೆ.

ಭೇದವಿಲ್ಲದಿದ್ದರೂ ಭೇದಕಾರ್ಯವನ್ನು ನಡೆಸಿಕೊಡುವ ಶಕ್ತಿಯೇ ವಿಶೇಷ. ಇದು ಎಲ್ಲ ಪದಾರ್ಥಗಳಲ್ಲಿಯೂ ಇದೆ. ಬಟ್ಟೆ ಮತ್ತು ಅದರ ರೂಪಗಳು ಭಿನ್ನ ವಲ್ಲ. ಆದರೂ ಬಟ್ಟೆ ರೂಪಶಬ್ದಗಳು ಅಪರ್ಯಾಯವಾಗಿವೆ. ಇದು ಭೇದ ಕಾರ್ಯ. ಅಭಿನ್ನವಾದ ಬಟ್ಟೆ ಮತ್ತು ರೂಪಗಳ ವಿಷಯದಲ್ಲಿ ಇಂತಹ ಭೇದ ಕಾರ್ಯವನ್ನು ನಡೆಸಿಕೊಡುವ ಶಕ್ತಿಯೊಂದು ಇದೆ. ಈ ಶಕ್ತಿಯೇ ವಿಶೇಷ.

ಶ್ರೀಮಧ್ವಾಚಾರ್ಯರು ಮತ್ತು ಜಯತೀರ್ಥರು 'ವಿಶೇಷ' ತತ್ವವನ್ನು ಸಮರ್ಥರೀತಿಯಲ್ಲಿ ಪ್ರತಿಪಾದಿಸಿದ್ದಾರೆ. ದ್ವೈತ ವೇದಾಂತ ದರ್ಶನದ ಚರಿತ್ರೆ ಯಲ್ಲಿ ಪ್ರಮುಖ ಸ್ಥಾನವನ್ನು ಹೊಂದಿರುವ ವ್ಯಾಸರಾಜರು ತಮ್ಮ ನ್ಯಾಯಾಮೃತ ಮತ್ತು ಮಂದಾರ ಮಂಜರಿ (ಉಪಾಧಿ ಖಂಡನ ಟೀಕಾ ಟಿಪ್ಪಣಿ) ಗಳಲ್ಲಿ 'ವಿಶೇಷ' ತತ್ವವನ್ನು ಪ್ರತಿಪಾದಿಸಿದ್ದಾರೆ. ಶ್ರೀವ್ಯಾಸರಾಜರು ಆಚಾರ್ಯ ಮಧ್ವರ ಮತ್ತು ಶ್ರೀಜಯತೀರ್ಥರ ಪ್ರತಿಪಾದನೆಯನ್ನೇ ವಿಶದಪಡಿಸಿ ತಪ್ಪುಕಲ್ಪನೆಗಳನ್ನು ಪರಿಹರಿ ಸಿದ್ದಾರೆ.

ಮಂದಾರ ಮಂಜರಿಯಲ್ಲಿ ಶ್ರೀವ್ಯಾಸರಾಜರು 'ವಿಶೇಷ' ತತ್ವವನ್ನು ಸಂಕ್ಷೇಪ ವಾಗಿ ಮತ್ತು ಕ್ರಮಬದ್ಧವಾಗಿ ಪ್ರತಿಪಾದಿಸಿದ್ದಾರೆ. ಈ ಪ್ರತಿಪಾದನೆ ತತ್ವ ಶಾಸ್ತ್ರವನ್ನು ಓದುವ ಎಲ್ಲರಿಗೂ ಬಹಳ ಉಪಯುಕ್ತವಾಗಿದೆ. ಇದನ್ನು ಹೀಗೆ ಸಂಗ್ರಹಿಸಬಹುದು.

**ಆಕ್ಷೇಪ :** ಯಾವುದೇ ಪ್ರಮೇಯದ ಅಸ್ತಿತ್ವವನ್ನು ತಿಳಿಯಲು ಪ್ರಮಾಣ ಮತ್ತು ಲಕ್ಷಣಗಳು ಅವಶ್ಯಕ. ಆದರೆ 'ವಿಶೇಷ' ತತ್ವದ ಬಗ್ಗೆ ಯಾವ ಪ್ರಮಾ ಣವೂ ಇಲ್ಲ ಮತ್ತು ಅದಕ್ಕೊಂದು ಲಕ್ಷಣವೇ ಇಲ್ಲ.

**ಉತ್ತರ :** 'ವಿಶೇಷ'ದ ವಿಷಯದಲ್ಲಿ ಶ್ರುತಿ ಮತ್ತು ಅರ್ಥಾಪತ್ತಿ ಪ್ರಮಾ ಣಗಳು ಅಭೇದ್ಯವಾಗಿವೆ. ಈ ಪ್ರಮಾಣಗಳನ್ನು ಶ್ರೀಮಧ್ವರು ಮತ್ತು ಶ್ರೀಜಯ ತೀರ್ಥರೇ ಹೇಳಿದ್ದರೂ ಶ್ರೀವ್ಯಾಸರಾಜರು ಅವುಗಳ ಬಗ್ಗೆ ಅನಂತರ ಬಂದ ಆಕ್ಷೇಪ ಗಳನ್ನು ಪರಿಹರಿಸಿ ಪ್ರಾಚೀನರ ಪ್ರತಿಪಾದನೆಯನ್ನು ದೃಢಪಡಿಸಿದ್ದಾರೆ.

ವಿಶೇಷ ತತ್ವಕ್ಕೆ ಎರಡು ಲಕ್ಷಣಗಳಿವೆ. 1) ಭೇದರಹಿತ ವಸ್ತುಗಳಿಗೆ ಸಂಬಂ ಧಿಸಿದ ಭೇದಕಾರ್ಯವನ್ನು ನಡೆಸಿಕೊಡುವ ಶಕ್ತಿಯೇ ವಿಶೇಷ. 2) ಒಂದೇ ಪದಾರ್ಥವನ್ನು ಹೇಳುವ ಅನೇಕ ಶಬ್ದಗಳು ಅಪರ್ಯಾಯವಾಗಿರುವಂತೆ ಮಾಡುವ ಶಕ್ತಿಯೇ ವಿಶೇಷ.

ಭೇದಕಾರ್ಯವನ್ನು ನಡೆಸಿಕೊಡುವ ಶಕ್ತಿಯಾದರೂ ಇದು ಭೇದವೇ ಅಲ್ಲ. ಭೇದದ ಪ್ರತಿನಿಧಿ, ವಿಶೇಷವು ಯಾವ ಪ್ರಮಾಣದಿಂದ ಸಿದ್ಧವಾಗುವುದೋ ಅದೇ

ಪ್ರಮಾಣದಿಂದಲೇ ಅದು ಭೇದ ಪ್ರತಿನಿಧಿಯಾದ ಶಕ್ತಿಯೆಂದು ಸಿದ್ಧವಾಗುವುದು. ವಿಶೇಷದ ಅಸ್ತಿತ್ವವು ಸಿದ್ಧವಾಗುವಾಗಲೇ ಅದು ಭೇದಪ್ರತಿನಿಧಿಯೆಂದೂ, ಪದಾರ್ಥಗಳಲ್ಲಿರುವ ಶಕ್ತಿಯೆಂದೂ ಸಿದ್ಧವಾಗುವುದರಿಂದ ಈ ಅಂಶಗಳ ಬಗ್ಗೆ ಯಾವ ಆಕ್ಷೇಪವೂ ಊರ್ಜಿತವಾಗುವುದಿಲ್ಲ.

ದ್ರವ್ಯ ಮತ್ತು ಅದರ ಗುಣಗಳು ಅಭಿನ್ನವೆಂದಾಗ ದ್ರವ್ಯವೊಂದೇ ಅಥವಾ ಗುಣವೊಂದೇ ಇರುವುದೆಂದೂ ಎರಡೂ ಇಲ್ಲವೆಂದೂ ಭಾವನೆ ಬರುವುದು. ಆದರೆ ಇದು ಸರಿಯಲ್ಲ. ಎರಡೂ ಇವೆ. ವಿಶೇಷವು ಎರಡರ ಇರುವನ್ನೂ ರಕ್ಷಿಸುತ್ತದೆ. ವಿಶೇಷದ ಈ ಕಾರ್ಯವನ್ನು ಎತ್ತಿ ತೋರಿಸುವಂತಹ ಲಕ್ಷಣವನ್ನು ಶ್ರೀವ್ಯಾಸ ರಾಜರು ನ್ಯಾಯಾಮೃತದಲ್ಲಿ ಹೇಳಿದ್ದಾರೆ. 'ಭೇದವಿಲ್ಲದಿದ್ದರೂ ಒಂದು ಮಾತ್ರ ಇರದಂತೆ (ಉಳಿಯದಂತೆ) ಮಾಡುವ ತತ್ವವೇ ವಿಶೇಷ'. ಶ್ರೀವ್ಯಾಸರಾಜರ ಈ ಲಕ್ಷಣ ಬಹಳ ಮುಖ್ಯವಾದುದು. ಏಕೆಂದರೆ ವಿಶಿಷ್ಟಾದ್ವೈತ ಪ್ರತಿಪಾದಕರಾದ ವೇದಾಂತ ದೇಶಿಕರು ಮತ್ತು ಪರಕಾಲಯತಿಗಳು 'ವಿಶೇಶ'ದ ಬಗ್ಗೆ ಮಾಡಿದ ತೀವ್ರ ವಾದ ಆಕ್ಷೇಪಕ್ಕೆ ಈ ಲಕ್ಷಣವು ಉತ್ತರ ಕೊಡುತ್ತದೆ.

**ವೇದಾಂತ ದೇಶಿಕರ ಆಕ್ಷೇಪ :** ಬ್ರಹ್ಮ ಮತ್ತು ಅವನ ಗುಣಗಳಿಗೆ ಅಭೇದ ವನ್ನು ದ್ವೈತಿಗಳು ಅಂಗೀಕರಿಸುತ್ತಾರೆ. ಇದರಿಂದ ಬ್ರಹ್ಮ ಮತ್ತು ಅವನ ಗುಣ ಇವೆರಡೂ ಇಲ್ಲವೆಂದೂ, ಒಂದು ಮಾತ್ರ ಇರುವುದೆಂದೂ ಅರ್ಥಾತ್ ಸಿದ್ಧವಾಗು ವುದು. ಬ್ರಹ್ಮನು ನಿರ್ಗುಣ ಎಂಬ ಅದ್ವೈತ ವಾದವನ್ನು ಖಂಡಿಸುವ ದ್ವೈತಿಗಳು ನಿರ್ಗುಣತ್ವದಲ್ಲಿ ಪರ್ಯವಸಾನವಾಗುವ ಬ್ರಹ್ಮ ಮತ್ತು ಅವನ ಗುಣಗಳ ಐಕ್ಯವನ್ನು ಹೇಳುವುದು ಸರಿಯಲ್ಲ. ಪರಕಾಲಯತಿಗಳೂ ಇದೇ ಆಕ್ಷೇಪವನ್ನು ಮಾಡಿದ್ದಾರೆ.

ಬ್ರಹ್ಮ ಮತ್ತು ಅವನ ಗುಣಗಳಿಗೆ ಅಭೇದವಿದ್ದರೂ ಅವೆರಡರ ಅಸ್ತಿತ್ವ ವನ್ನೂ ರಕ್ಷಿಸುವಂತಹ ಶಕ್ತಿಯೇ ವಿಶೇಷ ಎಂದು ಮೇಲೆ ವಿವರಿಸಿದ ವ್ಯಾಸರಾಜರ ಲಕ್ಷಣದಿಂದ ತಿಳಿಯುತ್ತದೆ. ಅಭೇದವಿದ್ದರೂ ಒಂದರ ಅಸ್ತಿತ್ವವನ್ನು ಅಳಿಸ ದಂತಹ ತತ್ವವನ್ನು 'ವಿಶೇಷ' ಎನ್ನುವ ಹೆಸರಿನಿಂದ ಶ್ರೀಮಧ್ವಾಚಾರ್ಯರು ಗುರುತಿಸಿದ್ದಾರೆ. ಈ ಅಂಶವನ್ನು ಶ್ರೀವ್ಯಾಸರಾಜರು ಎತ್ತಿ ತೋರಿಸಿ ವೇದಾಂತ ದೇಶಿಕರ ಮತ್ತು ಪರಕಾಲಯತಿಗಳ ಆಕ್ಷೇಪದಲ್ಲಿ ಯಾವ ಸತ್ವವೂ ಇಲ್ಲ ಎಂದು ತಿಳಿಯಲು ಮಾರ್ಗದರ್ಶನ ಮಾಡಿದ್ದಾರೆ.

'ವಿಶೇಷ'ವು ಪ್ರತ್ಯಕ್ಷ ಸಿದ್ಧ ಎಂದು ಶ್ರೀಮಧ್ವರು ಮತ್ತು ಶ್ರೀಜಯ ತೀರ್ಥರು ಪ್ರತಿಪಾದಿಸಿದ್ದಾರೆ. ಈ ಪ್ರತಿಪಾದನೆಗಾಗಿ ಅವರು ಮಾಡಿರುವ ವಿಶ್ಲೇಷಣೆಯನ್ನು ವ್ಯಾಸರಾಜರು ಇನ್ನೂ ವಿಸ್ತಾರವಾಗಿ ಮಾಡಿದ್ದಾರೆ. ಅಲ್ಲಿಯ ಪ್ರತಿಪಾದನೆಯಲ್ಲಿ ಸ್ಪಷ್ಟವಾಗದ ಅಂಶವನ್ನು ಸ್ಪಷ್ಟ ಪಡಿಸಿದ್ದಾರೆ.

ದ್ರವ್ಯ ಮತ್ತು ಗುಣಗಳಿಗೆ ಭೇದವನ್ನೇ ಅಂಗೀಕರಿಸುವ ರಾಮಾನುಜ ದರ್ಶನವು ಒಂದು ಹಂತದಲ್ಲಿ ಭೇದವು ವಸ್ತುಧರ್ಮದ (ಘಟತ್ವದ) ಸ್ವರೂಪವೆಂದು ಅಂಗೀಕರಿಸಿದೆ. ಸ್ವರೂಪವೇ ಆದರೆ 'ಘಟತ್ವಸ್ಯ ಭೇದಃ' ಎನ್ನುವ ಭೇದವನ್ನು ತೋರಿಸುವ ವ್ಯವಹಾರವು ಏಕೆ ಉಂಟಾಯಿತು ಎನ್ನುವ ಪ್ರಶ್ನೆ ಉದ್ಭವಿಸುತ್ತದೆ. ಘಟತ್ವ ಮತ್ತು ಭೇಧ ಶಬ್ದಗಳು ಏಕೆ ಅಪರ್ಯಾಯವಾಗಿವೆ ಎಂಬ ಪಶ್ನೆಯೂ ಉದ್ಭವಿಸುತ್ತದೆ. ಈ ಪ್ರಶ್ನೆಗಳಿಗೆ ರಾಮಾನುಜದರ್ಶನವು ಹೇಳಿರುವ ಉತ್ತರವನ್ನು ಪರಿಶೀಲಿಸಿ ಆ ಉತ್ತರಗಳು ಸರಿಯಲ್ಲವೆಂದು ಶ್ರೀವ್ಯಾಸರಾಜರು ತೋರಿಸಿದ್ದಾರೆ. ಇದರಿಂದ ದ್ರವ್ಯ-ಗುಣಗಳಿಗೆ ಭೇದವನ್ನು ಅಂಗೀಕರಸಲಾಗುವುದಿಲ್ಲವೆಂದೂ ಸವಿಶೇಷಾ ಭೇದವನ್ನೇ ಅಂಗೀಕರಿಸಬೇಕೆಂದೂ ಸಿದ್ಧವಾಗುತ್ತದೆ. ಈ ಅಂಶಗಳನ್ನು ವಿವರಿಸಲು ನಾಲ್ಕಾರು ಪುಟಗಳು ಬೇಕಾಗುತ್ತವೆ. ಅಷ್ಟು ವಿವರಣೆಗೆ ಸ್ಥಳಾವಕಾಶ ಇಲ್ಲ. ಆದ್ದರಿಂದ ವ್ಯಾಸರಾಜರು ಮಾಡಿರುವ ಸಮರ್ಥನೆಯನ್ನು ಸಂಗ್ರಹವಾಗಿ ಇಲ್ಲಿ ಹೇಳಲಾಗಿದೆ. ಮೂಲವನ್ನೇ ಓದಿದರೆ ಶ್ರೀವ್ಯಾಸರಾಜರ ಪ್ರತಿಪಾದನೆಯ ಮಹತ್ವ ಮತ್ತು ಗಾಂಭೀರ್ಯಗಳು ಚೆನ್ನಾಗಿ ತಿಳಿಯುತ್ತವೆ.

ನ್ಯಾಯಾಮೃತದ ಪ್ರಾರಂಭದಲ್ಲಿ ಶ್ರೀವ್ಯಾಸರಾಜರು ತಮ್ಮ ಬಗ್ಗೆ ಹೇಳಿರುವ ವಿಕ್ಷಿಪ್ತ ಸಂಗ್ರಹಾತ್ಕ್ವಾಪಿ ಕ್ವಾಪ್ಯುಕ್ತಸ್ಯೋಪಪಾದನಾತ್" ಎನ್ನುವ ಮಾತು ಅವರು ಮಾಡಿರುವ 'ವಿಶೇಷ' ಪ್ರತಿಪಾದನೆಗ ಚೆನ್ನಾಗಿ ಅನ್ವಯಿಸುತ್ತದೆ.

ಡಾ. ಸಿ. ಎಚ್. ಶ್ರೀನಿವಾಸಮೂರ್ತಿ.
ಮೈಸೂರು.

---



---

# ನಮುನಗಳು

## ಅವಿಸ್ಮರಣೀಯ ಕೊಡುಗೆ

ಶ್ರೀ ಶ್ರೀ ಕುಂಬಾಪುರ ವ್ಯಾಸರಾಜ ಮಠದ ಲಕ್ಷ್ಮೀಂದ್ರ ತೀರ್ಥರು—ರೂ.1,000
ಪ್ರೊ॥ ಬಿ. ವೆಂಕಟೇಶಾಚಾರ್ ಟ್ರಸ್ಟ್—ರೂ. 5,000
ಶ್ರೀ ಅನಂತಪದ್ಮನಾಭಾಚಾರ್ಯ—ಬೆಂಗಳೂರು ರೂ. 250

ರೂ. 50/ ಮತ್ತು ರೂ. 50/ ಮೇಲ್ಪಟ್ಟು ಕೊಟ್ಟಿರುವವರು.

1. ಶ್ರೀ ಟಿ. ಎಸ್. ವೆಂಕೋಬರಾವ್—ಬೊಂಬಾಯಿ–71
2. ಶ್ರೀಮತಿ ಆರ್. ಸಿದ್ದಮ್ಮ—ಬೆಂಗಳೂರು
3. ಶ್ರೀ ಎಸ್. ರಾಮಚಂದ್ರರಾವ್—ಬೆಂಗಳೂರು

ರೂ. 25/ ಮತ್ತು ರೂ. 25/ ಮೇಲ್ಪಟ್ಟು ಕೊಟ್ಟಿರುವವರು.

1. ಶ್ರೀ ಕೆ. ಕೆ. ಬನ್ನಿಂತಾಯ—ಅನಂತಾಡಿ (S. K.)
2. ಶ್ರೀ ಹೆಚ್. ರಾಘವೇಂದ್ರರಾವ್—ಕುರುಗೋಡು
3. ಶ್ರೀ ಕೆ. ಎಸ್. ಅಚ್ಯುತಬಲ್ಲಾಲ್—ಉಡುಪಿ
4. ಮೇನೇಜರ್ ಹುಬ್ಬಿ, ಧರ್ಮಸ್ಥಳ, ಮಂತ್ರಾಲಯ ಟ್ರಸ್ಟ್—ಮಂತ್ರಾಲಯ
5. ಶ್ರೀ ಸಿ. ಆರ್. ವ್ಯಾಸರಾವ್—ಉಡುಪಿ
6. ಶ್ರೀ ಪಿ. ಕೆ. ಕಾರಂತ—ಮಂಗಳೂರು
7. ಡಾ॥ ಎಮ್. ಡಿ. ಕಾಮತ್—ಮಂಗಳೂರು
8. ಶ್ರೀ ಎಮ್. ಎಲ್. ಎನ್. ಹೆಬ್ಬಾರ್—ಚಿಕ್ಕಮಗಳೂರು
9. ಶ್ರೀ ಕೆ. ಬಿ. ರಾಘವೇಂದ್ರರಾವ್—ಬೆಂಗಳೂರು
10. ಶ್ರೀ ಪಿ. ಎನ್. ದೇಶಪಾಂಡೆ—ಪಾಲೆ
11. ಶ್ರೀ ಎನ್. ಜಿ. ಗುಡಿ—ಕುಂದಗೋಳ್
12. ಶ್ರೀ ಯು. ಜಿ. ಸುಬ್ರಮಣ್ಯ—ಭದ್ರಾವತಿ
13. ಶ್ರೀ ವಿ. ಕೆ. ಪ್ರಭಂಜನರಾವ್—ಬೊಂಬಾಯಿ
14. ಶ್ರೀ ನರ್ಮದಾ ಆನಂದ್—ಬೆಂಗಳೂರು
15. ಶ್ರೀ ಮೈದೂರ್ ಆನಂದ್—ಬೆಂಗಳೂರು
16. ಶ್ರೀ ಎನ್. ಚಂದ್ರಕುಮಾರ್—ಬೆಂಗಳೂರು
17. ಶ್ರೀ ಪಿ. ಬಿ. ಕಟ್ಟಿ—ಬೆಂಗಳೂರು
18. ಶ್ರೀಮತಿ ಮೊಡ್ಡಿ ಸುಭಾಷಾಷಿ ಗುರುಪಾಟಾವ್—ಬೆಂಗಳೂರು
19. ಶ್ರೀ ವೈ. ಎನ್. ಗುರುರಾಜರಾವ್—ಬೆಂಗಳೂರು

20. ಶ್ರೀ ಜಿ. ಎಲ್. ನಾಗರಾಜರಾವ್—ಬೆಂಗಳೂರು
21. ಶ್ರೀ ಧೋಂಡಾಚಾರ್ಯ ಜೋಷಿ—ಸತ್ತಿ
22. ಹಿಂದು ಸ್ವಾ. ವೀ. ಸಾವರಕರ ಸ್ಮಾರಕ ಸಂಸ್ಥೆಗಳು
23. ಅ. ಭಾ. ಹಿಂದು ಮಹಾಸಭಾ—ನವದೆಹಲಿ
24. ಹಿಂದು ಸಭಾ ವಾರ್ತಾ—ಇಂದೋರು (ಮ. ಪ್ರ.) 452006
25. ಸ್ವಾ. ವೀ. ಸಾವರಕರ ರಾಷ್ಟ್ರೀಯ ಸ್ಮಾರಕ—ಬೊಂಬಾಯಿ-28
26. ಅ. ಭಾ. ಹಿಂದು ರಕ್ಷಾ ಸಮಿತಿ—ನವದೆಹಲಿ-5
27. ಹಿಂದು ರಾಷ್ಟ್ರವಾದಿ ಗೋಷ್ಠಿ—ಬೆಂಗಳೂರು-16
28. ಶ್ರೀ ಬಿ. ಕೆ. ನಾಗಭೂಷಣರಾವ್—ಬೆಂಗಳೂರು-19
29. ಶ್ರೀ ಎಮ್. ಆರ್. ರಾಮರಾವ್—ಬೆಂಗಳೂರು-70
30. ಶ್ರೀ ಹೆಚ್. ಎಸ್. ಗೋಪಿನಾಥ್—ವಿದ್ಯಾನಗರ, ಕೈರೋಜಿಲ್ಲೆ
31. ಶ್ರೀಮತಿ ಮತ್ತು ಶ್ರೀ ಎ. ವಿ. ಆನಂದರಾಮ್—ಮೈಸೂರು
32. ಶ್ರೀ ರಾಘವೇಂದ್ರರಾವ್—ಮೈಸೂರು
33. ಶ್ರೀ ಸಿ. ಎನ್. ಬಸವರಾಜು—ಮೈಸೂರು
34. ಶ್ರೀ ಆರ್. ಕೆ. ಸೂರ್ಯನಾರಾಯಣರಾವ್—ಬೆಂಗಳೂರು-8
35. ಎಂ. ಎಸ್. ಕೃಷ್ಣಮೂರ್ತಿ, ಅಧ್ಯಕ್ಷರು ಮಾಧ್ವ ಸಂಘ—ಬೆಂಗಳೂರು
36. ರಾಮಕೃಷ್ಣ ಕೇಕುಡರು—ಬೆಂಗಳೂರು

---



---

## ಇವರು ಬಡವರೆಂದ ಮಾತ್ರಕ್ಕೆ ನ್ಯಾಯದಿಂದ ವಂಚಿತರಾಗಬೇಕಿಲ್ಲ

## ಕರ್ನಾಟಕ ಸರ್ಕಾರವು ಉಚಿತ ಕಾನೂನು ನೆರವನ್ನು ಒದಗಿಸುತ್ತದೆ

### ಉಚಿತ ಕಾನೂನು ನೆರವು ಯೋಜನೆಯ ಉದ್ದೇಶ :—

ಬಡವರಿಗೆ ಅನ್ಯಾಯವಾಗುವ ಪ್ರಸಂಗಗಳು ಹಲವಾರು. ಅವರ ಜಮೀನು. ಅವರ ಆಸ್ತಿ–ಪಾಸ್ತಿ ಮತ್ತು ಅವರ ಇತರ ಹಕ್ಕುಗಳ ವಿಷಯದಲ್ಲಿ ಅನ್ಯಾಯವಾದರೆ ಅವರು ಅದನ್ನು ಸುಮ್ಮನೆ ಸಹಿಸಿಕೊಳ್ಳುವುದೇ ಹೆಚ್ಚು. ತಮಗಾಗಿ ನ್ಯಾಯ ದೊರಕಿಸಿಕೊಳ್ಳಲು ಅವರಿಗೆ ಕಾನೂನಿನ ಬಗ್ಗೆ ತಿಳುವಳಿಕೆಯಿರುವುದಿಲ್ಲ, ಇದ್ದರೂ ನ್ಯಾಯಾಲಯಗಳ ಮೂಲಕ ಕಾನೂನಿನ ಪರಿಹಾರ ಪಡೆಯಲು ಮಾಡಬೇಕಾದ ಖರ್ಚಿಗೆ ಅವರ ಬಳಿ ಹಣ ಇರುವುದಿಲ್ಲ. ಅಂತೆಯೇ ನೋವನ್ನು ನುಂಗಿಕೊಂಡು ಅನ್ಯಾಯವನ್ನು ಸಹಿಸುವರು.

ಕರ್ನಾಟಕ ಸರ್ಕಾರವು ಇಂತಹ ಬಡವರ ಹಕ್ಕುಗಳ ರಕ್ಷಣೆಗಾಗಿ ಮುಂದಡಿಯಿಟ್ಟಿದೆ. ಅದು ನ್ಯಾಯಾಲಯಗಳಲ್ಲಿ ನ್ಯಾಯಕ್ಕಾಗಿ ಹೋರಾಡುವ ಬಡವರಿಗೆ, ಅಗತ್ಯವಾದ ಧನ ಸಹಾಯವನ್ನು ನೀಡುವ ಕರ್ನಾಟಕ ರಾಜ್ಯ ಕಾನೂನು ನೆರವು ಮಂಡಳಿಗೆ ಕಾನೂನು ಮಂತ್ರಿಗಳೇ ಅಧ್ಯಕ್ಷರಾಗಿದ್ದಾರೆ.

### ಉಚಿತ ಕಾನೂನು ನೆರವು 'ಅಂದರೆ ಏನು ?

ಕ್ರಿಮಿನಲ್ ಮತ್ತು ಸಿವಿಲ್ ನ್ಯಾಯಾಲಯಗಳಲ್ಲಿ ನ್ಯಾಯ ಮಂಡಳಿಗಳಲ್ಲಿ, ಹೈಕೋರ್ಟ್‌ನಲ್ಲಿ, ಸುಪ್ರೀಂಕೋರ್ಟ್‌ನಲ್ಲಿ ಮತ್ತು ದಾವೆ ಹೂಡಿರುವ ಇತರ ಕಡೆಗಳಲ್ಲಿ ಉಚಿತ ಕಾನೂನು, ನೆರವು ಪಡೆಯಬಹುದು. ನ್ಯಾಯಾಲಯ ಶುಲ್ಕ, ವಕೀಲರ ಶುಲ್ಕ ಪ್ರೊಸೆಸ್ ಶುಲ್ಕ. ಅರ್ಜಿ ಶುಲ್ಕ ಮತ್ತು ಇತರ ಅಗತ್ಯ ವೆಚ್ಚಗಳನ್ನು ಮಂಡಳಿಯು ಭರಿಸುತ್ತದೆ. ವಕೀಲರ ಜೊತೆಗೆ ಉಚಿತ ಕಾನೂನು ಸಲಹೆಯನ್ನೂ ನೀಡಲಾಗುತ್ತದೆ.

### ಈ ನೆರವು ಪಡೆಯಲು ಯಾರು ಅರ್ಹರು ?

ವರ್ಷಕ್ಕೆ 8,000 ರೂ.ಗಳಿಗಿಂತ ಕಡಿಮೆ ಆದಾಯವುಳ್ಳ ಕರ್ನಾಟಕದ ನಿವಾಸಿಗಳಿಗೆ ಉಚಿತ ಕಾನೂನು ನೆರವು ಮತ್ತು ಸಲಹೆಗಳನ್ನು ಒದಗಿಸಲಾಗುತ್ತದೆ. ಆದರೆ ಈ ವಾರ್ಷಿಕ ಆದಾಯ ಮಿತಿಯು ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ವರ್ಗಗಳ ಜನರಿಗೆ; ಹೆಂಗಸರು, ಮಕ್ಕಳ ಸೇನೆ ಸಿಬ್ಬಂದಿ ಮತ್ತು ಮಾಜಿ ಯೋಧರಿಗೆ ಅನ್ವಯವಾಗುವುದಿಲ್ಲ.

ಯಾರನ್ನು ಸಂಪರ್ಕಿಸಬೇಕು—

ಎಲ್ಲಾ ಜಿಲ್ಲಾ ಕೇಂದ್ರಗಳಲ್ಲಿ ಮತ್ತು ತಾಲ್ಲೂಕು ಕೇಂದ್ರಗಳಲ್ಲಿ ಕಾನೂನು ನೆರವು 'ಸಮಿತಿಗಳಿವೆ.' ಜಿಲ್ಲಾ ಮಟ್ಟಗಳಲ್ಲಿ ಜಿಲ್ಲಾಧಿಕಾರಿಗಳು ಈ ಸಮಿತಿಗೆ ಅಧ್ಯಕ್ಷರಾಗಿದ್ದು ಜಿಲ್ಲಾ ಬಾರ್ ಅಸೋಸಿಯೇಶನ್ನಿನ ಅಧ್ಯಕ್ಷರು ಕಾರ್ಯನಿರ್ವಾಹಕ, ಉಪಾಧ್ಯಕ್ಷರಾಗಿರುತ್ತಾರೆ. ತಾಲ್ಲೂಕು ಮಟ್ಟದಲ್ಲಿ, ತಾಲ್ಲೂಕು ಬಾರ್ ಅಸೋಸಿಯೇಶನ್ನಿನ ಅಧ್ಯಕ್ಷರು ಈ ಸಮಿತಿಯ ಅಧ್ಯಕ್ಷರಾಗಿದ್ದು, ತಹಸೀಲ್ದಾರ್ ಮತ್ತಿತರು ಸದಸ್ಯರಾಗಿರುತ್ತಾರೆ. ಹೆಚ್ಚಿನ ಕಡೆಗಳಲ್ಲಿ ಕಾನೂನು ನೆರವು ಸಮಿತಿಗಳ ಕಛೇರಿಗಳು ನ್ಯಾಯಾಲಯದ ಆವರಣದಲ್ಲಿಯೇ ಇವೆ. ಈಗಾಗಲೇ ಸುಮಾರು 9,000 ಜನರು ಮಂಡಳಿಯಿಂದ ಉಚಿತ ಕಾನೂನು ನೆರವು ಪಡೆದಿದ್ದಾರೆ

ನ್ಯಾಯ: ನಿಮ್ಮ ಜನ್ಮಸಿದ್ಧ ಹಕ್ಕು ಅದನ್ನು ಕೇಳಿ ಪಡೆಯಿರಿ
ಸರಕಾರ ನಿಮ್ಮೊಂದಿಗಿದೆ.
ಕರ್ನಾಟಕ ಸರ್ಕಾರ–ಬಡವರಿಗೆ ನ್ಯಾಯ ದೊರಕಿಸಲು ಶ್ರಮಿಸುತ್ತಿದೆ.

ಕರ್ನಾಟಕ ವಾರ್ತೆ

---

## ಸ್ಥಳದಾನ

1. ಅನಂತಪದ್ಮನಾಭಾಚಾರ್ಯ —ರೂ. 200/-
2. ಬಿ. ಆರ್. ಸತ್ಯಮೂರ್ತಿ ಮತ್ತು ಕೆ.ಎಸ್. ರಾಮಕೃಷ್ಣ ಬಲ್ಲಾಳ
   ಶ್ರೀ ರಾಘವೇಂದ್ರ ಪ್ರಸನ್ನ, ಮೈಸೂರು —ರೂ, 100/-
3. ಶ್ರೀ ರಾಘವೇಂದ್ರ ಸೇವಾಸಮಿತಿ ಟ್ರಸ್ಟ್, ಕೆಂಗೇರಿ ಉಪನಗರ
   ಬೆಂಗಳೂರು-60 —ರೂ. 100/-
4. ಎಮ್. ಪಿ. ಬೋಜಯ್ಯ, B.A.
   ರೇಷ್ಮೆ ಜವಳಿ ವ್ಯಾಪಾರಿ, ಇಂಡಿಯನ್ ಬ್ಯಾಂಕ್ ಎದುರು
   ಮೈಸೂರು-1 —ರೂ. 100/-

# ಶ್ರೀ ವ್ಯಾಸರಾಜ ಪ್ರಶಸ್ತಿ

ಮಧ್ವಸಿದ್ಧಾಂತವೆಂಬ ಕ್ಷೀರಾಬ್ಧಿವೃದ್ಧಿಗೆ ಪೂರ್ಣಚಂದ್ರ ಶ್ರೀ ವ್ಯಾಸತೀರ್ಥರು ॥ ಮಧ್ವಸಿದ್ಧಾಂತದುಗ್ಧಾಬ್ಧಿ ವೃದ್ಧಿ ಪೂರ್ಣಕಲಾಧರಃ ॥

ವಿಜಯೀಂದ್ರರು

ವ್ಯಾಕರಣ ಮೀಮಾಂಸಾನ್ಯಾಯ ಶಾಸ್ತ್ರಾದಿ ಶಾಸ್ತ್ರವೇತ್ತರಾದ ಸಂಪ್ರದಾಯಾರ್ಥವೇತ್ತರು ॥ಪದವಾಕ್ಯ ಪ್ರಮಾಣಜ್ಞಾನ್ ಸಂಪ್ರದಾಯಾರ್ಥಕೋವಿದಾನ್॥

ರಾಘವೇಂದ್ರರು

ಕೆರೆಭಾವಿಪ್ರರ ಅಗ್ರಹಾರಂಗಳ ಮಾಡಿ । ಭೂಸುರರೊಂದು ಲಕ್ಷ ಕುಟುಂಬಗಳ ಪೊರೆವ ॥

ಶ್ರೀಪಾದರಾಜರು

ಶ್ರೀ ಮಧ್ವರು ಕಲ್ಪತರು. ಜಯತೀರ್ಥರು ಕಾಮಧೇನು, ವ್ಯಾಸಾರ್ಯರು ಚಿಂತಾಮಣಿ. ॥ ಶ್ರೀ ಮಧ್ವಃ ಕಲ್ಪವೃಕ್ಷಶ್ಚ ಜಯಾಚಾರ್ಯಾಸ್ತು ಧೇನವಃ॥ ಚಿಂತಾಮಣಿಸ್ತು ವ್ಯಾಸಾರ್ಯ: ಮುನಿತ್ರಯಮುದಾಹೃತಂ ॥

ಶ್ರೀಮುಷ್ಣ ಮಹಾತ್ಮೆ

ವಿದ್ಯಾದಿ ಮಹಾದಾನಗಳ ಪೊಂದಿದವರಿಗಿತ್ತು । ಹೃದ್ಯಹಯವದನನ ಕೃಪಾಬಲದಿ । ಗೆದ್ದು ॥

ವಾದಿರಾಜರು

ವ್ಯಾಸಯತಿಗಳು ಯತಿಗಳಿಗೂ, ಪರಾಜಿತರಾಗಿ ಶರಣಾಗತರಾದ ವಾದಿಗಳಿಗೂ ಮಧ್ವಮತವಿಜಯದ ಶಂಖದೋಪಾದಿಯಾದ ಕಂಠದಿಂದ ಉಪದೇಶಿಸುತ್ತಿದ್ದರು

ಸೋಮನಾಥಕವಿ

In my opinion Jaya Thirtha and Vyasa Thirtha present the highest dialibical skill in indian thought

ಡಾ. S. N. ಗುಪ್ತಾ

ಈಸು ಮುನಿಗಳಿದ್ದರೇನು ಮಾಡಿದರಯ್ಯ । ವ್ಯಾಸಮುನಿ ಮಧ್ವಮತವನುದ್ಧರಿಸಿದ ॥

ಪುರಂದರದಾಸರು

Register No. [illegible] - 172 WPP-28 Registered as Magazine No. MAG (5)
PRB-DECL-75/82-83 dated 25-5-1982

ಶ್ರೀ ವಿದ್ಯಾಮಾನ್ಯತೀರ್ಥರ ಸಂದೇಶ:-

ಸಾಧುಗಳ ಪರಿತ್ರಾಣ ದುಷ್ಕೃತಿಗಳ ವಿನಾಶರೂಪ ದ್ವಿಮುಖ ಪ್ರಯೋಜನ ವುಳ್ಳದ್ದು ಭಗವದವತಾರ. ಅದರಂತೆ ಸ್ವಮತಸ್ಥಾಪನ ಪರಮತನಿರಾಸರೂಪ ದ್ವಿಮುಖ ಕಾರ್ಯಸಾಧಕರು ಶ್ರೀ ವ್ಯಾಸತೀರ್ಥಭಗವತ್ಪಾದರು.

ನ್ಯಾಯಾಮೃತಾದಿ ಸ್ವತಂತ್ರಗ್ರಂಥರಚನ ಮಂದಾರಮಂಜರ್ಯಾದಿ ವ್ಯಾಖ್ಯಾನ ಗ್ರಂಥರಚನ ಪ್ರಾಕೃತಭಾಷಾರೂಪ ಪದಪದ್ಯಗಳ ರಚನಗಳೆಂಬ ಮೂರು ಹೆಜ್ಜೆಗಳನ್ನು ಇಕ್ಕಿರುವ ಇವರು ತ್ರಿವಿಕ್ರಮರೂಪರು ಏಕೆ ಹೇಳಬಾರದು?

ನ್ಯಾಯಾಮೃತ ತಾತ್ಪರ್ಯಚಂದ್ರಿಕಾ ತರ್ಕತಾಂಡವಗಳೆಂಬ ಪ್ರಸಿದ್ಧ ಪ್ರಕರಣ ಗ್ರಂಥರತ್ನತ್ರಯ ಕರ್ತರಾದ ಇವರು ತ್ರಿನೇತ್ರರಾದ ಶ್ರೀ ಮಹಾದೇವರಂತೆ ಶೋಭಿಸುತ್ತಾರಲ್ಲವೇ?

ಇವರು ಬ್ರಹ್ಮಚಾರಿ ಸನ್ಯಾಸಿಗಳು. ಬಹುಶಿಷ್ಯರೆಂಬ ಪುತ್ರರತ್ನರನ್ನು ಪಡೆದು ಇವರು ಗೃಹಸ್ಥಧರ್ಮಿಗಳೂ ಆಗಿದ್ದಾರೆ. ಹಂಪೆಯ ಅರಣ್ಯದಲ್ಲಿ ಭರತಗುರುಕುಲವನ್ನು ಸ್ಥಾಪಿಸಿ ಅದರ ಕುಲಪತಿಗಳಾಗಿದ್ದ ಇವರು ವಾನಪ್ರಸ್ಥಧರ್ಮಿಗಳೂ ಹೌದು. ಸಕಲ ತೀರ್ಥಕ್ಷೇತ್ರದೇವತೆಗಳ ಪರಿಚಯವನ್ನು ಪಾದಯಾತ್ರೆಯಿಂದ ಮಾಡಿದ ಇವರು ಶೂದ್ರಧರ್ಮಿಗಳು ಏಕೆ ಅಲ್ಲ? ಇವರು ಬ್ರಾಹ್ಮಣರು. ರಾಜನಿಗೆ ಕುಹೂಯೋಗವು ಬಂದಾಗ ಇವರು ರಾಜ್ಯಪರಿಪಾಲನವನ್ನು ಮಾಡಿ ಕ್ಷತ್ರಿಯಧರ್ಮಿಗಳು ಆಗಿದ್ದಾರೆ. ಸಕಲ ಶಾಸ್ತ್ರಗಳ ವಿಶೇಷ ಕೃಷಿ ಮಾಡಿದ್ದರಿಂದ ಇವರನ್ನು ವೈಶ್ಯಧರ್ಮಿಗಳೆಂದೂ ಹೇಳಬಹುದು. ಹೀಗೆ ಇವರು ಸರ್ವವರ್ಣಾಶ್ರಮ ಧರ್ಮಗಳುಳ್ಳವರಾದುದರಿಂದ ದೇವತೆಗಳಿಗೆ ಸರ್ವವರ್ಣಾಶ್ರಮಧರ್ಮಗಳು ಇರುವದರಿಂದ ಇವರನ್ನು ದೇವತೆಗಳೆಂದೇ ಭಾವಿಸಬೇಕು.

ಧನ್ವಂತರಿಯಂತೆ ಇವರು ಭವರೋಗವೈದ್ಯರು ಆಗಿರುವದರಿಂದ ಇವರನ್ನು ಆಶ್ರಯಿಸಿದವರ ತಪ್ಪುದಾರದ್ದು ಆಚಾರವಾ[illegible] ಬಾ[illegible]ಳುವವರಲ್ಲಿ ಸಂದೇಹವಿಲ್ಲ.

ಇತ್ಯನೇಕ ನಾರಾಯಣ ಸ್ಮರಣ

[illegible signature]

ಈ ಪತ್ರಿಕೆಯನ್ನು ಅ.ಭಾ.ಮಾ. ಮಹಾ ಮಂಡಲದ ಕಾರ್ಯದರ್ಶಿಗಳಾದ
ಶ್ರೀ ಎನ್. ಕೃಷ್ಣಸ್ವಾಮಿಯವರು ಬೃಂದಾವನ ಪ್ರೆಸ್ಸಿನಲ್ಲಿ ಮುದ್ರಿಸಿ, ಅ.ಭಾ.ಮಾ.
ಮಹಾಮಂಡಲದ ಪರವಾಗಿ ಬೆಂಗಳೂರಿನಲ್ಲಿ ಪ್ರಕಟಿಸಿದರು.